# ಕೆ.ಸತ್ಯನಾರಾಯಣ ಅವರ ಕತೆಗಳು

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಅರ್ಪಿಸಿದ ನಿಬಂಧ

೨೦೧೪-೨೦೧೫

ಸಂಶೋಧಕರ ನೋಂದಣಿ ಸಂಖ್ಯೆ

೧೪೧೨೦೧೦೩೦೦೪೭






ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ

# ಕೆ.ಸತ್ಯನಾರಾಯಣ ಅವರ ಕತೆಗಳು

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಅರ್ಪಿಸಿದ ನಿಬಂಧ



೨೦೧೪-೨೦೧೫

ಸಂಶೋಧಕರ ನೋಂದಣಿ ಸಂಖ್ಯೆ

೧೪೧೨೦೧೦೩೦೦೪೭




ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ.

1203-A

# ವಿಷಯ ಸೂಚಿ (ಪರಿವಿಡಿ)

# ಅಧ್ಯಾಯ-೧
# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಡಾ. ಕೆ.ಸತ್ಯನಾರಾಯಣರವರು ೧೯೫೪ರಲ್ಲಿ ಮಂಡ್ಯ ನಗರದಲ್ಲಿರುವ ಗುತ್ತಲಿನಲ್ಲಿ ಜನಿಸಿದರು. ಇವರು ತಮ್ಮ ಶೈಕ್ಷಣಿಕ ಜೀವನವನ್ನು ಮಂಡ್ಯ ಮತ್ತು ಕೊಳ್ಳೇಗಾಲದಲ್ಲಿ ಮುಗಿಸಿದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದರು. ೧೯೭೮ ರಲ್ಲಿ ಇಂಡಿಯನ್ ರೆವೆನ್ಯೂ ಸರ್ವಿಸ್‌ಗೆ ಸೇರಿ ಆದಾಯ ತೆರಿಗೆ ಇಲಾಖೆಯಲ್ಲಿ ಬೆಂಗಳೂರು, ದಾವಣಗೆರೆ, ನಾಗಾಪುರ, ಚೆನ್ನೈ, ಗುಂತೂರು, ಹೈದರಾಬಾದ್‌ಗಳಲ್ಲಿ ಕೆಲಸ ನಿರ್ವಹಿಸಿದ್ದಾರೆ.

ಡಾ.ಕೆ.ಸತ್ಯನಾರಾಯಣರವರ ಕಥೆಗಳನ್ನು ಸುಲಭದಲ್ಲಿ ಸಂಕ್ಷಿಪ್ತವಾಗಿ ವಿವರಿಸಿ ಹೇಳಲು ಆಗುವುದಿಲ್ಲ. ಅವುಗಳ ಧೋರಣೆ ಏನು ಎಂದು ಸ್ಪಷ್ಟವಾಗಿ ವಿವರಿಸುವುದು ಕಷ್ಟವೇ. ಧೋರಣೆಯನ್ನು ಮೊದಲು ನಿರ್ಧರಿಸುವುದು ಅದಕ್ಕೆ ಸರಿಯಾಗಿ ಕಥೆಗಾರ ತನ್ನ ಕಥೆ ರೂಪಿಸುವುದಿಲ್ಲ. ಅವರ ಕಥೆಗಳಲ್ಲಿ ಕಥೆ ಹೇಳುವವರು, ಕೇಳುವವರು ಮತ್ತು ಕಥನದ ಸಂದರ್ಭಗಳು ಕಥೆಯಷ್ಟೇ ಪ್ರಧಾನವಾಗಿವೆ.

ಇವರು ತೆರಿಗೆ ಇಲಾಖೆಯಲ್ಲಿರುವುದಕ್ಕೂ ಅವರ ಸಾಹಿತ್ಯ ಪಡೆದಿರುವ ಈ ಹದಕ್ಕೂ ಏನಾದರೂ ಸಂಬಂಧವಿದೆಯೇ ಎಂದು ಯೋಚನೆ ಬರುತ್ತದೆ. ಆದರೆ ಅದಕ್ಕಿಂತ ಮುಖ್ಯವಾಗಿ ಅವರು ತೆರೆದ ಓದನ್ನು ಮಾಡಿಕೊಂಡು ಬಂದಿರುವುದು. ಲೋಕನಿರೀಕ್ಷಣೆಯನ್ನು ಆದಷ್ಟೂ ವೈವಿಧ್ಯಮಯವಾಗಿ ಮಾಡುತ್ತಿರುವುದು ಅವರ ಬರವಣಿಗೆಯ ಹಿಂದಿರುವ ಹೊಳಪು ಎಂದೆನಿಸುತ್ತದೆ. ಸತ್ಯನಾರಾಯಣ ಅವರು ಸಮಾಜವಾದಿಯಲ್ಲ, ಹಿಂದುತ್ವವಾದಿಯೂ ಅಲ್ಲ, ಸಾಮ್ಯವಾದಿಯೂ ಅಲ್ಲ. ಪ್ರಾಯಃ ನಮ್ಮ ನಡುವೆ ಈಗ ಬರೆಯುತ್ತಿರುವ ಐವತ್ತು ದಾಟಿದವರ ಪೈಕಿ ಸಾಹಿತ್ಯವನ್ನೇ ಮುಖ್ಯ ಪ್ರಾಣ ಚಿಂತನೆ ಎಂದು ನೆಮ್ಮಿಕೊಂಡಿರುವವರು ಕಮ್ಮಿ. ಸತ್ಯನಾರಾಯಣ ಅವರಿಗೆ ಹಲವು ಬಗೆಯ ರಾಜಕೀಯ, ಸಾಮಾಜಿಕ ವಿಚಾರ ಮಾರ್ಗಗಳು ಗೊತ್ತು. ಆದರೆ ಅವರಿಗೆ ದೊಡ್ಡ ಮಾರ್ಗಕ್ಕಿಂತ ಸಾಮಾನ್ಯ ರಸ್ತೆಯೇ ಪ್ರಿಯ. ಮಾರ್ಗ ಬಹಳ ಥಾಳಾದ ಸಾಮಾಜಿಕ ಆಡಂಬರರಹಿತ ಘೋಷಣಾ

ರೀತಿಯ ಅಭಿವ್ಯಕ್ತಿಯನ್ನು ಸೂಚಿಸಿದರೆ, ರಸ್ತೆ(ಬೀದಿ) ತಾನೇ ಕಂಡುಕೊಂಡ ಒಳನೋಟ, ಸತ್ಯಗಳನ್ನು ನಮ್ರವಾಗಿ, ದಿಟ್ಟವಾಗಿ ಹಠವಿಲ್ಲದೆ ಸಾಹಿತ್ಯದಲ್ಲಿ ದಾಖಲೆ ಮಾಡುತ್ತ ಹೋಗುತ್ತದೆ.

ಕಥೆ ಕಾದಂಬರಿಗಳಂತೆ ಪ್ರಬಂಧವನ್ನೂ ತಮ್ಮ ಅಭಿವ್ಯಕ್ತಿಯ ಮುಖ್ಯ ಮಾಧ್ಯಮವಾಗಿ ಮಾಡಿಕೊಂಡಿರುವ ಕೆ. ಸತ್ಯನಾರಾಯಣ ಅವರು ಇದುವರೆಗೆ ಮೂರು ಪ್ರಬಂಧ ಸಂಕಲನಗಳನ್ನು–'ನಮ್ಮ ಪ್ರೀತಿಯ ಕ್ರಿಕೆಟ್ (೧೯೮೮)', 'ದಾಂಪತ್ಯಕ್ಕೊಂದು ಶೀಲಾ (೧೯೯೫)', 'ನಿಂತ ಬಂಡಿಯ ದೇಶಾಂತರ (೨೦೦೭)', 'ಕುಶಲೋಪರಿ (೨೦೦೮)', ಎಂಬ ಅಂಕಣ ಬರಹಗಳ ಸಂಕಲನ ಪ್ರಕಟಿಸಿದ್ದಾರೆ. ಸಾರ್ವಜನಿಕವಾಗಿ ಸಲ್ಲಬೇಕೆಂಬ ವಾಗ್ವಿಲಾಸದ ಗತ್ತನ್ನು ಬಿಟ್ಟುಕೊಟ್ಟು ಆತ್ಮೀಯರೊಂದಿಗೆ ಸಹಜವಾಗಿ ಸಂಪಾದಿಸುವ ಇಲ್ಲಿನ ಬರಹಗಳು ಆ ಕಾರಣದಿಂದಲೇ ಓದುಗರ ಮನಸ್ಸನ್ನು ತಟ್ಟುತ್ತವೆ.

ಕೆ. ಸತ್ಯನಾರಾಯಣರವರ ಕಥೆಗಳು ಹೇಗಿವೆ ಎಂದರೆ ಪುಸ್ತಕದ ಯಾವುದೇ ಪುಟದಿಂದ ನಮ್ಮ ಓದನ್ನು ಆರಂಭಿಸಬಹುದು. ಇಲ್ಲಿ ಗುಪ್ತವಾದ ಸೈದ್ಧಾಂತಿಕ ಅಜೆಂಡಾ, ಕಾರ್ಯ ಕಾರಣ ಸಂಬಂಧವನ್ನು ಬೆಳಸಿ ನಿಮ್ಮಿಷ್ಟೇ ಸತ್ಯವನ್ನು ಸ್ಥಾಪಿಸುವ ಕ್ರಮದಲ್ಲಿ ಸಂಯೋಜಿಸುವ ಒತ್ತಡಗಳು ಇಲ್ಲದಿರುವುದರಿಂದ ಈ ಬರಹಗಳಲ್ಲಿ ಒಂದು ಬಗೆಯ ಸಹಜ ಸ್ವಚ್ಛಂದತೆ ತಾನಾಗಿ ಬಂದುಬಿಟ್ಟಿದೆ. 'ಸಡಿಲ ಬಂಧ' 'ಸ್ವಚ್ಚಂಧತೆ' 'ಲಹರಿ' ಇವೆಲ್ಲ ಈ ಪ್ರಕಾರದಲ್ಲಿ ಬರಹಗಾರನಿಗೆ ದೊರಕುವ ಕೆಲವು ಸವಲತ್ತುಗಳು. ಆದರೆ ಸತ್ಯನಾರಾಯಣರವರು ಒಬ್ಬ ನುರಿತ ಬರಹಗಾರರು; ತಮ್ಮ ಬರಹಗಳನ್ನು ನಿರುದ್ದಿಶ್ಯ ಹರಟೆಗಳಾಗಿ ಬೆಳೆಯಲು ಅವರು ಬಿಟ್ಟಿಲ್ಲ. ಇವರು ವೈಚಾರಿಕವಾಗಿ, ವೈಕಜ್ಞಾನಿಕವಾಗಿ ಮತ್ತು ಸಾಮಾಜಿಕವಾಗಿ ಚಿಂತಿಸುತ್ತಿದ್ದರು. ಅವರ ಎಲ್ಲಾ ಕಥೆಗಳಲ್ಲಿನ ಉದ್ದೇಶ ವ್ಯಕ್ತಿಯ ಪರಿವರ್ತನೆಯೊಂದಿಗೆ ಸಮಾಜದ ಪರಿವರ್ತನೆಯಾಗಬೇಕೆಂಬುದೇ ಆಗಿತ್ತು.

ಕೆ.ಸತ್ಯನಾರಾಯಣರವರಿಗೆ ಬಡತನ ಎಂದರೆ ಏನು ಎನ್ನುವ ವಿಷಯದಲ್ಲಿ ಒಮ್ಮತವಿಲ್ಲ. ಸದ್ಯದ ಸಂದರ್ಭದಲ್ಲಿಯಂತೂ ಅದು ರಾಜಕೀಯ ವಾಗ್ವಾದಗಳಿಗೆ ಗುರಿಯಾದ ಒಂದು ಪರಿಕಲ್ಪನೆ. ಸಮಾಜ ವಿಜ್ಞಾನದ ಹಿನ್ನಲೆಯಿಂದ ಬಂದ ಸತ್ಯನಾರಾಯಣರವರು ಈ ಪರಿಕಲ್ಪನೆಯನ್ನು ತಮ್ಮದೇ ಆದ ರೀತಿಯಲ್ಲಿ ತಮ್ಮ ಲೇಖನಗಳಲ್ಲಿ ವ್ಯಾಖ್ಯಾನಿಸುತ್ತಾರೆ.

ಸತ್ಯನಾರಾಯಣರವರ ಆದ್ಯತೆಗಳು, ಜೀವನದೃಷ್ಟಿ, ವೈಚಾರಿಕತೆ, ಅವಲೋಕನ ಇವೆಲ್ಲಾ ಸೂಕ್ಷ್ಮವೂ, ಪ್ರಬುದ್ಧವೂ ಆಗಿದ್ದರೆ ಈ ಪ್ರಕಾರದಲ್ಲೂ ಅವರು ತಮ್ಮ ಸೃಜನಶೀಲತೆಯನ್ನು ಕಾಯ್ದುಕೊಳ್ಳಬಹುದು ಎಂಬುದಕ್ಕೆ ಇವರು ಪ್ರಕಟಿಸಿರುವ ಕಥೆಗಳು ಹಾಗೂ ಕಾದಂಬರಿಗಳೇ ಸಾಕ್ಷಿ. ಮೇಲುನೋಟಕ್ಕೆ ಕಾಣುವಂತೆ ಈ ಕಥೆಗಳು 'ಸಣ್ಣ ಸಣ್ಣ' ಜಗತ್ತುಗಳ 'ಸಾಮಾನ್ಯ' ಮನುಷ್ಯರ ದೈನಂದಿನ ಬದುಕಿನ 'ಸಾಮಾನ್ಯ' ವಿವರಗಳು, ಸನ್ನಿವೇಶಗಳು, ಮತ್ತು ವಿದ್ಯಮಾನಗಳ ಸುತ್ತ ಹೆಣೆದವು. ಅವರ ಕತೆಗಳು ಕೆಲವು ಸನ್ನಿವೇಶಗಳಲ್ಲಿ ಸರಳವಾಗಿ ಹಾಸ್ಯ ಮಿಶ್ರಿತವಾಗಿಯೂ ಕಂಡು ಬಂದು, ಓದುಗರಿಗೆ ಹೆಚ್ಚು ಕುತೂಹಲವನ್ನುಂಟುಮಾಡಿ ಸಾಮರಸ್ಯವಿರಬೇಕೆಂದು ತಮ್ಮ ಆಶಯವನ್ನು ವ್ಯಕ್ತಪಡಿಸಿದ್ದಾರೆ.

'ಫಿರ್ಕಾ–ಹಾಗೆಂದರೇನು' ಎಂಬ ಪ್ರಬಂಧವು ತನ್ನಷ್ಟಕ್ಕೆ ಆಕರ್ಷಕವಾಗಿರುವಂತೆ ಈ ಸಂಪುಟದ ಇತರ ಬರಹಗಳಿಗೂ ಅರ್ಥಪೂರ್ಣವಾದ ಪ್ರವೇಶಿಕೆಯೊಂದನ್ನು ಒದಗಿಸುವಂತೆ "ನಾನು ಮೊದಲಿನಿಂದಲೂ ಬೆಳೆದ ರೀತಿಯೇ ಫಿರ್ಕಾ ಮಾದರಿಯದು. ಎಲ್ಲವೂ ಕಣ್ಣಳತೆ, ಕೈ ಅಳತೆ ಕೂಗಳತೆಯಲ್ಲೇ ಸಿಗಬೇಕು" ಎನ್ನುವ ಸತ್ಯನಾರಾಯಣರವರು ತಮ್ಮ ವೈಯುಕ್ತಿಕ ಜೀವನದ ಹಲವು ಸ್ವಾರಸ್ಯಕರ ವಿವರಗಳನ್ನು ಕೊಡುವುದರ ಜೊತೆಜೊತೆಗೇ ಒಂದು ವಿಕೇಂದ್ರಿತ ಜೀವನ ವ್ಯವಸ್ಥೆ–ವಿಧಾನಗಳ ಮಾದರಿಯನ್ನೇ ನಮ್ಮೆದುರು ಕಟ್ಟುತ್ತಾ ಹೋಗುತ್ತಾರೆ. ಎಲ್ಲವನ್ನು ಒಂದು ಬೃಹತ್ತಾದ, ಕೇಂದ್ರೀಕೃತವಾದ, ಏಕೀಕೃತವಾದ, 'ಜಾಗತಿಕ'ವಾದ ನಾಗರೀಕತೆಯ ನೆಲೆಯಲ್ಲೇ ನೋಡುವ ಚಿಂತನಾ ಕ್ರಮಕ್ಕೆ ಪರ್ಯಾಯವಾದ ಇನ್ನೊಂದು ಯೋಚನಾ ಕ್ರಮವು ತುಸು ಲಘುಧಾಟಿಯಲ್ಲಿ ಬಿಂಬಿತವಾಗುತ್ತದೆ.

ಸತ್ಯನಾರಾಯಣರವರು 'ನಾನೇಕೆ ಅಯೋಧ್ಯೆಗೆ ಹೋಗುವುದಿಲ್ಲ?' ಎಂಬ ಪ್ರಬಂಧದಲ್ಲಿ ತಮ್ಮ ಜೀವನದ ವಿವಿಧ ಘಟ್ಟಗಳಲ್ಲಿ ರಾಮನ ಪ್ರತಿಮೆ ತಮ್ಮಲ್ಲಿ ವೈವಿಧ್ಯಮಯವಾಗಿ ಬೆಳೆದ ಬಗೆಯನ್ನು ದಟ್ಟವಾದ ವಿವರಗಳಲ್ಲಿ ನಿರೂಪಿಸುತ್ತಾ ಹೋಗುತ್ತಾರೆ. ಹಾಗೆಯೇ ಏಕಕಾಲದಲ್ಲಿ ಧಾರ್ಮಿಕ ಮೂಲಭೂತವಾದಿಗಳು ಮತ್ತು ಸೆಕ್ಯುಲರಿಸ್ಟರು ಇಬ್ಬರ ಬಗ್ಗೆಯೂ ತಮ್ಮ ಅತೃಪ್ತಿಯನ್ನು ತೋರುತ್ತಾರೆ.

ಸತ್ಯನಾರಾಯಣರವರು ತೀರಾ ವೈಯುಕ್ತಿಕವಾದ ಅನುಭವ ಕಥನಗಳಲ್ಲಿಯೂ ವಿಶಾಲವಾದ ಬದುಕಿನ ಹಲವು ಸಂಕಥನಗಳನ್ನು ಸ್ಪರ್ಶಿಸಿಬಿಡುವ ಪ್ರತಿಭೆಯನ್ನು ಹಲವು

ಪ್ರಬಂಧಗಳಲ್ಲಿ ತೋರಿದ್ದಾರೆ. ಇವರ 'ನಮ್ಮ ಪ್ರೀತಿಯ ಕ್ರಿಕೆಟ್' ಎಂಬ ಬರಹದಲ್ಲಿ ತಮ್ಮ ಬಾಲ್ಯದ ಕ್ರಿಕೆಟ್ ನೆನಪುಗಳನ್ನು ಪ್ರಸ್ತಾಪಿಸುತ್ತಲೇ ಕ್ರಿಕೆಟ್ ಆಟದ ಸ್ವರೂಪದಲ್ಲಿ ಆಗಿರುವ ಬದಲಾವಣೆಗಳಲ್ಲಿ ಒಟ್ಟಾರೆ ನಮ್ಮ ಬದುಕಿನ ಸ್ವರೂಪದಲ್ಲಿ ಮತ್ತು ನಮ್ಮ ಜೀವನದ ಆದ್ಯತೆಗಳಲ್ಲಿ ಆಗಿರುವ ಬದಲಾವಣೆಗಳನ್ನು ಲಘುದಾಟಿಯಲ್ಲಿ ಸೂಚಿಸಿಬಿಡುತ್ತಾರೆ. ಸ್ಥಳೀಯ ವೈವಿಧ್ಯಗಳೆಲ್ಲ ಕಣ್ಮರೆಯಾಗುತ್ತ ಎಲ್ಲವೂ ಏಕತಾನತೆಯತ್ತ, ಕೇಂದ್ರೀಕರಣದತ್ತ ಸಾಗುತ್ತಿರುವ ಸದ್ಯದ ನಾಗರೀಕತೆಯ ಗತಿಯನ್ನು ಕ್ರಿಕೆಟ್ ಅನುಭವದ ಸಾಕ್ಷ್ಯದಲ್ಲಿ ತಿಳಿಸಿದ್ದಾರೆ. 'ಊಟಕ್ಕೆ ಕೂಗುವುದು' 'ಕೈತುತ್ತು', 'ಪೋಸ್ಟ್ ಬಂತು ಪೋಸ್ಟ್', 'ಪೆಟ್ಟಿ ಅಂಗಡಿ ಪ್ರತಾಪ' ಮುಂತಾದ ಬರಹಗಳ ವಸ್ತು ಮತ್ತು ಧಾಟಿಯೂ ಹೆಚ್ಚುಕಡಿಮೆ ಇದೇ ರೀತಿಯನ್ನು ಬಿಂಬಿಸುತ್ತಾರೆ.

ಪ್ರತಿಯೊಂದು ಸಾಹಿತ್ಯವು ಕೂಡ ಅಂದಂದಿನ ಸಮಕಾಲೀನ ಜೀವನವನ್ನು ಪ್ರತಿಬಿಂಬಿಸುತ್ತದೆ. ಹಾಗೂ ಬದಲಾವಣೆಯನ್ನು ಆಶಯವನ್ನು ಒಳಗೊಂಡಿರುತ್ತದೆ. ಇಂತಹ ಬರಹಗಳು ಹಾಗೂ ಲೇಖನಗಳು ಕಾಲಮಾನದ ಜನಜೀವನದ ಎಲ್ಲಾ ಮುಖಗಳನ್ನು ಒಳಗೊಂಡಿರುತ್ತವೆ. ಸಮಗ್ರವಾಗಿ ಅಲ್ಲದಿದ್ದರೂ ಕೆಲವೊಂದು ಅಂಶಗಳನ್ನು ಬರೀ ಉಲ್ಲೇಖಗಳಿಂದಲೋ, ಇಲ್ಲವೇ ಅಲ್ಲಲ್ಲಿ ಬರಹಗಳಲ್ಲಿನ ವಿಚಾರಗಳಿಂದಲೋ, ಆಯಾ ಜನಜೀವನವನ್ನು, ಪ್ರಾದೇಶಿಕತೆಯನ್ನು ಪ್ರತಿಬಿಂಬಿಸುತ್ತವೆ.

ಸತ್ಯನಾರಾಯಣರವರು ತಮ್ಮ ಕಥೆಗಳ ತಂತ್ರದಲ್ಲಿ ಮಾಸ್ತಿಯವರು ಸವೆಸಿದ ರಾಜಮಾರ್ಗವನ್ನೇ ಹಿಡಿದಿರುವುದು ಕಂಡುಬರುತ್ತದೆ. ತಂತ್ರದಲ್ಲಿ ಹೋಲಿಕೆ ಇದ್ದರೂ ಮನೋಧರ್ಮದಲ್ಲಿ ಕಥೆಗಾರನಿಗೂ ಮಾಸ್ತಿಯವರಿಗೂ ತುಂಬಾ ವ್ಯತ್ಯಾಸಗಳಿವೆ. ಮಾಸ್ತಿಯವರ ನಂಬಿಕೆ ಮತ್ತು ಸತ್ಯನಾರಾಯಣರವರ ನಂಬಿಕೆಗಳ ನಡುವೆ ಕನ್ನಡದ ಇಡೀ ನವ್ಯ ಸಾಹಿತ್ಯವೇ ಇದೆ. ಸತ್ಯನಾರಾಯಣರವರ ಕಥೆಗಳಲ್ಲಿ ಸತ್ಯ ಮತ್ತು ಸುಳ್ಳುಗಳ ಸರಳ ವಿಭಜನೆ ಇಲ್ಲ. ಇದು ಅಥವಾ ಅದು, ಇದು ಸತ್ಯವಾದರೆ ಅದು ಅಲ್ಲ ಎನ್ನುವ ತರ್ಕದ ಇಕ್ಕಟ್ಟಿನಿಂದ ಅವರ ಕಥೆಗಳು ತಪ್ಪಿಸಿಕೊಂಡಿವೆ.

ಸತ್ಯನಾರಾಯಣರವರು ಬಂಡಾಯಗಾರನ ಹಾಗೆ ತನ್ನ ಕಥೆಗಳನ್ನು ಬರೆಯದೇ ಇರುವುದಕ್ಕೆ ಕಾರಣವಿದೆ. ಅವರ ಕಥೆಗಳ ಊರುಗಳು– 'ಮಾರ್ಕ್ ಟುಲಿ ಹೇಳಿದ ಕಥೆ'ಯ ಮೇಲುಕೋಟೆ, 'ನಜೀರ ಸಾಬು' ಕಥೆಯ ಬಿಸಿಲವಾಡಿ, 'ಮುದುಕಿ ಹೇಳಿದ ಸರ್ ಎಂ.ವಿ.

ಕಥೆ : ಸರ್ ಎಂ.ವಿ. ತಿಳಿದ ಮುದುಕಿ ಕಥೆ' ಮತ್ತು 'ನಿಮ್ಮ ಮೊದಲ ಪ್ರೇಮದ ಕಥೆ'ಯ ಊರುಗಳು ದೊಡ್ಡ ನಗರಗಳಲ್ಲ; ಹಾಗೆಂದು ತೀರಾ ಹಳ್ಳಿ ಕೊಂಪೆಗಳೂ ಅಲ್ಲ. ಹಳೆಯದ್ದನ್ನು ಪೂರ್ತ ಬಿಡಲಾಗದ, ಪೂರ್ತ ಆಧುನಿಕವಾಗುವಷ್ಟು ಆರ್ಥಿಕ ಬಲವೂ ಇಲ್ಲದ ಈ ಊರುಗಳ ಬದುಕು ಸಾಂಸ್ಕೃತಿಕ ಸಂದಿಗ್ಧದಲ್ಲಿ ರೂಪುಗೊಳ್ಳುವಂತೆ ಇವರ ಕಥೆಗಳಲ್ಲಿ ಬಿಂಬಿತವಾಗಿದೆ.

'ಮುದುಕಿ ಹೇಳಿದ ಸರ್ ಎಂ.ವಿ. ಕಥೆ, ಸರ್.ಎಂ.ವಿ. ತಿಳಿದ ಮುದುಕಿ ಕಥೆ'ಯಲ್ಲಿ ಲೇಖಕರು ರಾಮಾಯಣದಲ್ಲಿ ಬರುವ ಅಳಿಲಿನ ಹಾಗೆ, ತಮ್ಮ ಪಾತ್ರವನ್ನು ಕಥೆಯಲ್ಲಿ ಸಾರ್ಥಕ್ಯಗೊಳಿಸಿಕೊಂಡಿದ್ದಾರೆ. ಸರ್.ಎಂ.ವಿ. ಅವರು ಧನಸಹಾಯದ ನೆರವಿನಿಂದ ಕೊಂಡುಕೊಂಡ ಮುದುಕಿಯ ರುಬ್ಬುವ ಕಲ್ಲನ್ನು, ಸರ್.ಎಂ.ವಿ. ಅವರ ಮುದ್ದೇನಹಳ್ಳಿಯಲ್ಲಿ ಮನೆ ಪ್ರದರ್ಶನಕ್ಕೆ ತಲುಪಿಸಿ ತಮ್ಮ ಕೈಲಾದ ಸಾರ್ಥಕ್ಯ ಕೆಲಸ ಮಾಡಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ ಯಾರಿಗೂ ತಿಳಿಯದ ಸರ್.ಎಂ.ವಿ. ಅವರ ವ್ಯಕ್ತಿತ್ವವನ್ನು ಎತ್ತಿ ಹಿಡಿಯುವಂತಹ ಈ ಕಥೆಯನ್ನು ಮುದುಕಿಯ ಬಳಿ ಕೇಳಿಕೊಂಡು ಸುಮ್ಮನಾಗದೇ, ಅನೇಕರಿಗೆ ಪಸರಿಸುವ ಅವರ ಪ್ರಯತ್ನ ನಿಜಕ್ಕೂ ಮೆಚ್ಚುಗೆಗೆ ಪಾತ್ರವಾಗುವಂತಹುದು.

ಈ ಕಥೆಯನ್ನು ಒಂದು ಮಾದರಿಯಲ್ಲಿ ಮತ್ತು ಶೈಲಿಯಲ್ಲಿ ಬರೆಯುವ ಕಥೆಗಾರ 'ಸಂಭಾವ್ಯ'ವಾದ ಕತೆಗಳನ್ನು ಮಾತ್ರ ಹೇಳಬಲ್ಲ; ಅಸಾಧ್ಯವಾದುದ್ದರ ಕಡೆಗೆ ಕೈಚಾಚುವ ಕ್ರಾಂತಿಕಾರಿಯಾಗಲಾರ. ಕುಟುಂಬ ಮತ್ತು ದಾಂಪತ್ಯಗಳು ಒಂದು ನಿರ್ದಿಷ್ಟ ಐಡಿಯಾಲಜಿಯ ಉತ್ಪನ್ನಗಳು ಎಂಬುದು ನಿಜ. ಆದರೆ ಲೇಖಕನಾದವನು, ಆ ಮಿತಿಯ ಒಳಗೂ ಅವು ಅರಳುವ ಅಥವಾ ಮುರುಟಿಹೋಗುವ ಸಾಧ್ಯತೆಗಳನ್ನು ಗಮನಿಸದೆ ಇದ್ದರೆ ಆತ ಲೇಖಕನೇ ಅಲ್ಲ. 'ನಿಮ್ಮ ಮೊದಲ ಪ್ರೇಮದ ಕಥೆ' ಕೂಡ ಈ ಬಗೆಯ 'ಸಾಧ್ಯತೆಗಳ' ಒಂದು ಕತೆ. ಕತೆಯ ಕೊನೆಯ ಭಾಗ ಮತ್ತು ಕತೆಯ ಶೀರ್ಷಿಕೆ ಕೂಡ ಇದನ್ನೇ ಧ್ವನಿಸುತ್ತದೆ.

ಹೀಗೆ ಕನ್ನಡ ಸಾರಸ್ವತ ಲೋಕದಲ್ಲಿ ತಮ್ಮದೇ ಛಾಪು ಮೂಡಿಸಿರುವ ಡಾ.ಕೆ. ಸತ್ಯನಾರಾಯಣ ಅವರು ಸಾಹಿತ್ಯ, ಸಂಸ್ಕೃತಿಗೆ ಮತ್ತು ಸಾಮಾಜಿಕತೆಗೆ ಉಪಕಾರಿ ಮನೋಭಾವ ಹೊಂದಿರುವ ಸಮಾಜಮುಖಿಯಾಗಿದ್ದಾರೆ. ಇವರ ಉತ್ತಮ ಬರಹಗಳು,

ಪ್ರಬಂಧಗಳು ಮತ್ತು ಕಥೆಗಳು ನಿಬಂಧ ರಚನೆಗೆ ಅರ್ಹವಾಗಿರುವುದರಿಂದ ಕನ್ನಡ ಎಂ.ಫಿಲ್ ಪದವಿಗಾಗಿ ಈ ಅಧ್ಯಯನವನ್ನು ಕೈಗೆತ್ತಿಕೊಂಡಿದ್ದೇನೆ.

ಒಂದು ಸಾಹಿತ್ಯ ಕೃತಿ ಏನಾಗಿದೆ ಎನ್ನುವುದಕ್ಕಿಂತ ಓದುಗನ ಅಂತರಂಗದಲ್ಲಿ ಅದು ಯಾವ ರೀತಿಯ ಪರಿಣಾಮ ಉಂಟುಮಾಡುತ್ತದೆ ಎಂಬ ಅರಿವು ಮುಖ್ಯವಾಗುತ್ತದೆ. ಒಂದು ಕೃತಿಗೆ ಎಷ್ಟು ಓದುಗರಿರುವರೋ ಅಷ್ಟು ಅರ್ಥಾವತಾರಗಳಿವೆ. ಓದುಗರಿಂದ ಪ್ರತ್ಯೇಕವಾದ ಅರ್ಥವೊಂದು ಇಲ್ಲವೇ ಇಲ್ಲ. ಗಟ್ಟಿಮುಟ್ಟಾದ ಕಥನದ ನೆರವಿನಿಂದ ಕಥೆಗಳು ಓದುಗರೊಡನೆ ನಿರಂತರವಾದ ಸಂವಾದ ನಡೆಸಿದಾಗ ಮಾತ್ರ ಆ ಕಥೆ ಉಳಿಯಲು ಸಾಧ್ಯವಾಗುತ್ತದೆ.

ಇಲ್ಲಿನ ಕತೆಗಳ ನಿರೂಪಣೆಯ ವಿನೂತನವಾದ ತಂತ್ರ, ನಿರೂಪಣಾ ವಿಧಾನ ಮತ್ತು ಶೈಲಿಯಿಂದಾಗಿ ಸಿದ್ಧ ಮಾದರಿಯ ಕತೆಗಳಿಂದ ಭೀನ್ನವಾಗಿ ನಿಲ್ಲುತ್ತವೆ. ವರದಿ, ಅಧ್ಯಯನ, ವಿಡಂಬನೆ, ಕಾಲ್ಪನಿಕ ಜಗತ್ತಿನ ಕಟ್ಟುಕಥೆ, ವಾಸ್ತವಗಳೆಲ್ಲವನ್ನೂ ತನ್ನ ತೆಕ್ಕೆಗೆ ತೆಗೆದುಕೊಂಡು ಕಥೆಗಳನ್ನು ಕಟ್ಟುವ ಸಾಹಸವನ್ನು ಇಂಗ್ಲೀಷ್ ಕತೆಗಾರರು ಹಾಗೂ ಕಾದಂಬರಿಕಾರರು ಕೈಗೊಂಡಂತೆ ಕನ್ನಡದಲ್ಲಿ ಯಾರೂ ಮಾಡಿದಂತಿಲ್ಲ. ಸತ್ಯನಾರಾಯಣ ಅವರು ಇಲ್ಲಿ ಅದನ್ನು ಪ್ರಯತ್ನಿಸಿ ಹೊಸ ಬಗೆಯ ಬರವಣಿಗೆಯ ಒಂದು ನಾಂದಿಯಿಟ್ಟಿದ್ದಾರೆ. ಇದರ ಹೊಸತನದಿಂದಾಗಿ ಮತ್ತು ಓದುಗನನ್ನು ವಿಭಿನ್ನ ನಿಟ್ಟಿನಿಂದ ಪ್ರವೇಶಿಸುವ ನಿರೂಪಣಾ ವಿಧಾನದಿಂದಾಗಿ ಇವರ ಕತೆಗಳನ್ನು ಹಾಗೆ ಓದಿ ಅರ್ಥ ಮಾಡಿಕೊಳ್ಳಬಹುದು, ಎಂದುಕೊಳ್ಳುವ ಹಾಗಿಲ್ಲ. ಓದಿದ ಬಳಿಕ ಈ ಬಗೆಯ ತಂತ್ರ, ಪ್ರಯೋಗಶೀಲತೆ, ಅದರ ಪರಿಣಾಮಕಾರತ್ವ, ಪ್ರಸ್ತುತತೆ ಇತ್ಯಾದಿಗಳ ಕುರಿತಂತೆ ಒಂದಷ್ಟು ಚರ್ಚೆ, ವಾದ, ಸಾಧ್ಯವಾದಲ್ಲಿ ಇದು ನಮಗೆ ಹೆಚ್ಚು ಸ್ಪಷ್ಟವಾಗತ್ತದೆ ಎನಿಸುತ್ತದೆ.

ಪ್ರೊ.ಟಿ.ಪಿ.ಅಶೋಕ ರವರು ಇವರ ಕತೆಗೆಳ ಬರೆಯುತ್ತಾ " ಸದ್ಯದ ಲೇಖಕರ ಆದ್ಯತೆಗಳು, ಜೀವನದೃಷ್ಟಿ, ವೈಚಾರಿಕತೆ, ಅವಲೋಕನ ಇದೆಲ್ಲಾ ಸೂಕ್ಷ್ಮವೂ, ಪ್ರಬುದ್ಧವೂ, ಆಗಿದ್ದರೆ ಕತೆಗಳ ಪ್ರಕಾರದಲ್ಲೂ ತಮ್ಮ ಸೃಜನಶೀಲತೆಯನ್ನು ಕಾಯ್ದುಕೊಳ್ಳಬಹುದು ಎಂಬುದಕ್ಕೆ ಸತ್ಯನಾರಾಯಣರ ಈಲ್ಲಿ ಕತೆಗಳೇ ಸಾಕ್ಷಿ. ಇವರ ಕತೆಗಳಲ್ಲಿ ಕೇವಲ 'ಘನ'ವಾದದ್ದರ ಆರಾಧನೆ ಅಥವಾ ವಿಜೃಂಭಣೆ ಎಲ್ಲೂ ಇಲ್ಲ. ಹಾಗೆಯೇ ಆಸ್ತಿಕ–ನಾಸ್ತಿಕ, ಕ್ರಾಂತಿಕಾರ–ಸನಾತನಿ, ಪರಂಪರೆ–ಆಧುನಿಕತೆ ಮುಂತಾದ ದ್ವಿದಳ ವರ್ಗೀಕರಣ ಹಾಗೂ

ವಿಭಜನೆಯ ಪರಿಚಿತ ಮಾದರಿಗಳನ್ನು ಬಿಟ್ಟುಕೊಟ್ಟು ನಿತ್ಯದ ಜೀವನಾನುಭವದ ನೆಲೆಯಲ್ಲಿ ಧ್ಯಾನಿಸಲು ಸಾಧ್ಯವಾಗಿರುವುದೇ ಇಲ್ಲಿಯ ಕತೆಗಳ ಹೆಚ್ಚುಗಾರಿಕೆಯಾಗಿದೆ. ಸತ್ಯನಾರಾಯಣ ಥಿಯರಿಗಳಲ್ಲಿ ಅಷ್ಟಾಗಿ ಆಸಕ್ತಿ ತೋರುವುದಿಲ್ಲ. ಥಿಯರಿಗಳಿಗಿಂತ ಹೆಚ್ಚಾಗಿ ಮನುಷ್ಯರು ಅವರನ್ನು ಆಕರ್ಷಿಸುತ್ತಾರೆ. ಇವರ ಕತೆಗಳ ಮತ್ತೊಂದು ವಿಶೇಷತೆಯೆಂದರೆ ತುಸು ಅಸಾಂಪ್ರದ್ರಾಯಿಕ ಎನ್ನಬಹುದಾದ ವಿಷಯಗಳ ಆಯ್ಕೆ ಮತ್ತು ಅಷ್ಟೇ ಅಸಾಂಪ್ರದಾಯಕ ನಿರೂಪಣೆ ಹಾಗೂ ವಿಶ್ಲೇಷಣೆ ಮತ್ತು ಅಂಚಿನಲ್ಲಿರುವ ಸಂಗತಿಗಳಿಗೆ ಸಿಗುವ ಪ್ರಾಮುಖ್ಯ. ಸಾರ್ವಜನಿಕವಾಗಿ ಸಲ್ಲಲ್ಲೇಬೇಕೆಂಬ ವಾಗ್ವಿಲಾಸದ ಗತ್ತನ್ನು ಬಿಟ್ಟುಕೊಟ್ಟು ಇಲ್ಲಿಯ ಬರಹಗಳು ಆತ್ಮೀಯರೊಂದಿಗೆ ಸಹಜವಾಗಿ ಸಂವಾದಿಸುತ್ತವೆ. ಈ ಹಿನ್ನಲೆಯಲ್ಲಿ ಸತ್ಯನಾರಾಯಣರ ಕತೆಗಳಿಗೆ ವಿಶೇಷ ಮಹತ್ವವಿದೆ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

'ಕೆ.ಸತ್ಯನಾರಾಯಣರವರ ಕಥೆಗಳು' ಎಂಬ ಶೀರ್ಷಿಕೆಯಡಿಯಲ್ಲಿ ಈ ಅಧ್ಯಯನ ಕೈಗೊಳ್ಳಲಾಗಿದೆ. ಸತ್ಯನಾರಾಯಣ ರವರ ಕಥೆಗಳ ಅಧ್ಯಯನ ಇದಾಗಿದ್ದು ಇಲ್ಲಿ ಕಥಾವಸ್ತು, ಪಾತ್ರ ಚಿತ್ರಣ, ಸನ್ನಿವೇಶ ವರ್ಣನೆ, ನಿರೂಪಣೆ, ಶೈಲಿ, ಲೇಖಕರ ಜೀವನ ದೃಷ್ಟಿಗಳನ್ನು; ಸಂಸ್ಕೃತಿ, ಜೀವನ ಚಿತ್ರಣ, ಸಾಂಸ್ಕೃತಿಕ ಚಟುವಟಿಕೆಗಳು ಸಮಾಜದೊಡಗಿನ ಸಂಬಂಧ ಮತ್ತು ಸತ್ಯನಾರಾಯಣರ ವ್ಯಕ್ತಿತ್ವ ಈ ಎಲ್ಲಾ ಅಂಶಗಳನ್ನು ಸಮಗ್ರ ರೀತಿಯಲ್ಲಿ ಅಧ್ಯಯನ ಮಾಡುವ ಪ್ರಯತ್ನವನ್ನು ಇಲ್ಲಿ ಕೈಗೊಂಡಿದ್ದೇನೆ.

# ಅಧ್ಯಾಯ–೨

## ನಾರಾಯಣರವರ ಬರಹ : ಪ್ರಭಾವ ಮತ್ತು ಪ್ರೇರಣೆ

ಡಾ. ಕೆ.ಸತ್ಯನಾರಾಯಣರವರು ೨೧ ಏಪ್ರಿಲ್ ೧೯೫೪ ರಂದು ಮಂಡ್ಯ ನಗರದಲ್ಲಿರುವ ಗುತ್ತಲುವಿನಲ್ಲಿ ಜನಿಸಿದರು. ತಂದೆ ಕೆ.ಎಸ್.ಕೃಷ್ಣಮೂರ್ತಿ, ತಾಯಿ ಲಕ್ಷ್ಮಿ ನರಸಮ್ಮ, ಇವರು ಮೂಲತಃ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಕೊಪ್ಪ ಗ್ರಾಮದವರು. ಕೆ.ಸತ್ಯನಾರಾಯಣರವರು ತಮ್ಮ ಶಾಲಾ ಜೀವನವನ್ನು ಮತ್ತು ಕಾಲೇಜು ಶಿಕ್ಷಣವನ್ನು ಮಂಡ್ಯ ಮತ್ತು ಕೊಳ್ಳೇಗಾಲದಲ್ಲಿ ಮುಗಿಸಿದರು. ಇವರು ಬಿ.ಎ. ಪದವಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ೫ ನೇ ರ್‍ಯಾಂಕ್ ಪಡೆದು ಭಾರತ ಸರ್ಕಾರದ ರಾಷ್ಟ್ರೀಯ ಮೆರಿಟ್ ಸ್ಕಾಲರ್‌ಷಿಪ್‌ಗೆ ಪಾತ್ರರಾಗಿದ್ದಾರೆ. ಹಾಗೂ ರಾಜ್ಯಶಾಸ್ತ್ರ ವಿಭಾಗದಲ್ಲಿ ಅತೀಹೆಚ್ಚು ಅಂಕ ಪಡೆದು ಚಿನ್ನದ ಪದಕವನ್ನು ಪಡೆದುಕೊಂಡಿದ್ದಾರೆ. ೧೯೭೪ರಲ್ಲಿ ಅರ್ಥಶಾಸ್ತ್ರದ ಎಂ.ಎ.ನಲ್ಲಿ ೮ನೇ ರ್‍ಯಾಂಕ್ ಪಡೆದ ಕೀರ್ತಿ ಇವರದು.

ಕೆ.ಸತ್ಯನಾರಾಯಣರವರು ೧೯೭೮ ರಲ್ಲಿ ಆದಾಯ ತೆರಿಗೆ ಇಲಾಖೆಗೆ ಕರ್ತವ್ಯಕ್ಕೆ ಸೇರಿ ಬೇರೆ ಬೇರೆ ದರ್ಜೆಗಳಲ್ಲಿ ಕರ್ತವ್ಯ ನಿರ್ವಹಿಸಿರುತ್ತಾರೆ. ಪ್ರಸ್ತುತ ಇವರು ಕರ್ನಾಟಕ ಮತ್ತು ಗೋವಾ ಆದಾಯ ತೆರಿಗೆ ಇಲಾಖೆಯ ಪ್ರಾದೇಶಿಕ ವಿಭಾಗದ ಮುಖ್ಯ ಕಮೀಷನರ್ ಆಗಿ ಕರ್ತವ್ಯ ನಿರ್ವಹಿಸುತ್ತಿರುತ್ತಾರೆ. ಕರ್ನಾಟಕ ಮತ್ತು ಗೋವಾ ತೆರಿಗೆ ಇಲಾಖೆಯಲ್ಲಿ ಅತೀ ಹೆಚ್ಚು ತೆರಿಗೆ ಸಂಗ್ರಹ ಮಾಡಿರುವ ಕೀರ್ತಿ ಇವರದು. ಕೆ. ಸತ್ಯನಾರಾಯಣರವರು ಹಣಕಾಸಿನ ನೀತಿಗೆ ಸಂಬಂಧಪಟ್ಟ ತರಬೇತಿಯನ್ನು ಐ.ಎಂ.ಎಫ್. ಪ್ರಾದೇಶಿಕ ತರಬೇತಿ ಕೇಂದ್ರ ಸಿಂಗಪುರ(೨೦೦೦)ದಿಂದ ಪಡೆದಿರುತ್ತಾರೆ. ಹಾಗೂ ವಾರ್‌ಟನ್ ಸ್ಕೂಲ್ ಆಫ್ ಬ್ಯುಸಿನೆಸ್ ಯುನಿವರ್‌ಸಿಟಿ ಆಫ್ ಪೆನ್ಸಿಲ್‌ವಾನಿಯಾ ದಲ್ಲಿ ಏರ್ಪಡಿಸಿದ್ದ ಗ್ಲೋಬಲ್ ಲೀಡರ್‌ಷಿಪ್ ಕಾರ್ಯಕ್ರಮದಲ್ಲಿ ೨೦೧೨ ರಲ್ಲಿ ಭಾಗವಹಿಸಿದ್ದಾರೆ.

ಕೆ.ಸತ್ಯನಾರಾಯಣರವರು ಕನ್ನಡ ಸಾಹಿತ್ಯದಲ್ಲಿ ನವ್ಯಕಾಲದ ನಂತರದ ಲೇಖಕರಲ್ಲಿ ಗುರುತಿಸಿಕೊಂಡಿದ್ದಾರೆ. ಇವರ , ಬರವಣಿಗೆಯು ಅನುಭವ ಹಾಗೂ ಪ್ರಯೋಗಶೀಲತೆಗೆ

ಹೆಸರುವಾಸಿಯಾಗಿವೆ. ಇವರು ಸಣ್ಣಕತೆಗಳು, ಕಾದಂಬರಿ, ಪ್ರಬಂಧ, ಸಾಹಿತ್ಯ, ಮತ್ತು ಸಾಂಸ್ಕೃತಿಕ ವಿಮರ್ಶೆಗಳು ಸೇರಿದಂತೆ ೨೦ ಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದ್ದಾರೆ.

ಕೆ.ಸತ್ಯನಾರಾಯಣರವರು ಎರಡು ಸಲ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 'ನಕ್ಸಲ್ ವರಸೆ' ಪುಸ್ತಕಕ್ಕೆ ಮಾಸ್ತಿ ಟ್ರಸ್ಟ್‌ವತಿಯಿಂದ ಮಾಸ್ತಿ ಪುರಸ್ಕಾರ, ಬಿ.ಎಂ.ಶ್ರೀ ಫೌಂಡೇಷನ್ ವತಿಯಿಂದ ಎಂ.ವಿ.ಶ್ರೀ ಪುರಸ್ಕಾರ, ಹಾಗೂ ಕನ್ನಡಪ್ರಭ ದಿನ ಪತ್ರಿಕೆಯಿಂದ ಸಂಕ್ರಾಂತಿ ಮತ್ತು ಯುಗಾದಿ ಕಥಾ ಪುರಸ್ಕಾರಗಳು, ಮತ್ತು ಗೌರಿ ಕಾದಂಬರಿಗೆ ಆರ್ಯಭಟ ಪ್ರಶಸ್ತಿಯನ್ನು ಪಡೆದಿರುತ್ತಾರೆ. ಶ್ರೀಯುತರಿಗೆ ಜುಲೈ ೨೦೧೩ ರಲ್ಲಿ ಕನ್ನಡ ಸಾಹಿತ್ಯ ಮತ್ತು ಆಡಳಿತಕ್ಕೆ ಇವರು ನೀಡಿದ ಅಪಾರ ಕೊಡುಗೆಗೆ ಬೆಂಗಳೂರು ವಿಶ್ವವಿದಾನಿಲಯವು ಡಿ.ಲಿಟ್ ಪದವಿಯನ್ನು ನೀಡಿ ಗೌರವಿಸಿತು.

ಕೆ.ಸತ್ಯನಾರಾಯಣ ರವರು ಈವರೆಗೆ ಪ್ರಕಟಿಸಿರುವ 'ಒಂದು ಕಥಾನಕದ ಮೂಲಕ', 'ರಾಜಧಾನಿಯಲ್ಲಿ ಶ್ರೀಮತಿಯರು', 'ಗೌರಿ', 'ಸನ್ನಿಧಾನ', 'ಕಾಲಜಿಂಕೆ', 'ವಿಚ್ಛೇದನ ಪರಿಣಯ' (ಕಾದಂಬರಿಗಳು) 'ನಿಮ್ಮ ಮೊದಲ ಪ್ರೇಮಕಥೆ', 'ಹಳೆಯ ಕಾಲದ ಹೊಸಕಥೆ', 'ಹೆಗ್ಗುರುತು', 'ನಕ್ಸಲ್‌ವರಸೆ', 'ವಿಕ್ಟೋರಿಯಾ ಮಗ ದೇವಲಿಂಗು', 'ಈ ತನಕದ ಕತೆಗಳು'(ಸಣ್ಣಕತೆಗಳು) 'ಲೋಕ ಪ್ರಬಂಧ', 'ನಮ್ಮ ಪ್ರೀತಿಯ ಕ್ರಿಕೆಟ್', 'ನಿಂತ ಬಂಡಿಯ ದೇಶಾಂತರ', 'ದಾಂಪತ್ಯಕ್ಕೊಂದು ಶೀಲ', 'ಕುಶಲೋಪರಿ'(ಪ್ರಬಂಧ) 'ಆಸಕ್ತಿ', 'ಮನೋಧರ್ಮ', 'ಖಾಸಗಿ ವಿಮರ್ಶೆ'(ಸಾಹಿತ್ಯ ಮಿಮರ್ಶಾ ಕೃತಿ) 'ಸದ್ದು ದೇವರು ಸ್ನಾನ ಮಾಡುತ್ತಿದ್ದಾರೆ' (ಕೈಲಾಸ ಮಾನಸ ಸರೋವರದ ಪ್ರವಾಸ ಕಥನ) ಕೃತಿಗಳನ್ನು ರಚಿಸಿದ್ದಾರೆ. ಹಾಗೂ ಇವರ ಇತ್ತೀಚಿನ ಕೃತಿಗಳು 'ಮುಂದಣ ಅನಂತ' ಹಾಗೂ 'ಸುಮ್ಮನೆ ಓದೋಣ' ಇವು ಲೇಖನಗಳ ಸಂಗ್ರಹ ವಾಗಿರುತ್ತವೆ.

ಕೆ.ಸತ್ಯನಾರಾಯಣವರ ಪ್ರಬಂಧಗಳು, ವಿಮರ್ಶಾತ್ಮಕ ಲೇಖನಗಳು ಹಾಗೂ ಕಥಾ ಸಂಕಲನಗಳನ್ನು ಕರ್ನಾಟಕ ಸಾಹಿತ್ಯ ಪರಿಷತ್, ನ್ಯಾಷನಲ್ ಬುಕ್ ಟ್ರಸ್ಟ್, ಬೆಂಗಳೂರು ವಿಶ್ವವಿದ್ಯಾನಿಲಯ, ಜೈನ್ ವಿಶ್ವವಿದ್ಯಾನಿಲಯ, ಮತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹೊರ ತರುತ್ತಿವೆ. ಹಾಗೂ ಇವರ ಕಾದಂಬರಿ ಮತ್ತು ಸಣ್ಣ ಕತೆಗಳನ್ನು ಬೆಂಗಳೂರು ದೂರದರ್ಶನ ಕೇಂದ್ರವು ಕಿರುಚಿತ್ರಗಳಾಗಿ ಚಿತ್ರೀಕರಿಸಿ ಪ್ರಸಾರ ಮಾಡಿದೆ.

ಸತ್ಯನಾರಾಯಣವರ ಹಲವಾರು ಕಥೆಗಳು ಪ್ರಜಾವಾಣಿ, ಸುಧಾ, ಮಯೂರ, ಕನ್ನಡ ಪ್ರಭ, ಮುಂಬೈವಾಣಿ, ವಿಜಯ ಕರ್ನಾಟಕ, ಹಾಗೂ ಭಾವನಾ, ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಮತ್ತು 'ಕಿಸಾ ಗೌತಮಿಗೊಂದು ಕಥೆ' ಈ ಕಥಾನಕವನ್ನು ಪ್ರೊ.ಸಿ.ನಾಗಣ್ಣ ಅವರು ಇಂಗ್ಲೀಷಿಗೆ ಅನುವಾದಿಸಿದ್ದಾರೆ. 'ವಿಕ್ಟೋರಿಯಾ ಮಗ ದೇವಲಿಂಗು' ಕಥಾ ಸಂಕಲನ ಕುರಿತಂತೆ ಡಿ.ಎಸ್.ನಾಗಭೂಷಣವರು ಮತ್ತು ವೆಂಕಟ್ರಮಣಗೌಡ ರವರು ಸಮೀಕ್ಷೆಗಳನ್ನು ಬರೆದು ಪ್ರಕಟಿಸಿದ್ದಾರೆ.

ಕೆ. ಸತ್ಯನಾರಾಯಣರವರ ಮಗಳು ಪ್ರಿಯಂವದ ಮತ್ತು ಮಗ ಚಂದನ್ ನ್ಯೂಯಾರ್ಕ್ ಮತ್ತು ವರ್ಜಿನೀಯಾದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಶ್ರೀಯುತರು ಪ್ರಸ್ತುತ ತಮ್ಮ ಪತ್ನಿ ಸುಮಿತ್ರರೊಡನೆ ಬೆಂಗಳೂರಿನಲ್ಲಿ ವಾಸವಿದ್ದು ಇದೀಗ ಬೆಂಗಳೂರಿನಲ್ಲಿ ಮುಖ್ಯ ಆದಾಯ ತೆರಿಗೆ ಕಮಿಷನರ್ ಆಗಿ ಕಾರ್ಯನಿರ್ವಹಿಸುತ್ತಿದ್ದು? ಜೊತೆಗೆ ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಂಡಿದ್ದಾರೆ.

ಸತ್ಯನಾರಾಯಣರವರು ಸಾಮಾನ್ಯವಾಗಿ ತಮ್ಮ ಬರಹಗಳಲ್ಲಿ ಒಬ್ಬರೋ ಇಬ್ಬರೋ ಚಿಂತಕರ ಮಾದರಿಯನ್ನು ಗಟ್ಟಿಯಾಗಿ ಹಿಡಿದುಕೊಂಡು, ವಿಚಾರಗಳ ಸತ್ವ ಹಾಗೂ ಸಮಕಾಲೀನ ಪ್ರಸ್ತುತತೆ ತೋರಿಹೋದಾಗಲೂ, ತಾವು ನಂಬಿಕೊಂಡು ಬಂದಿರುವ, ತಮ್ಮ ಸೃಜನಶೀಲ ಬರವಣಿಗೆಗೆ ಪ್ರೇರಕವಾಗಿರುವ/ಪ್ರೇರಕವಾಗಿದ್ದ ಚಿಂತನೆಯ ಮಾದರಿಗಳನ್ನೇ ಬಳಸಿದ್ದಾರೆ. ಲೋಹಿಯಾ ವಾದದ ಪ್ರಖರತೆಯನ್ನು ಒಪ್ಪಿಕೊಂಡು ಅದು ಸಮಾಜದ ಒಂದು ವರ್ಗದವರಿಗೆ ಮಾತ್ರ ಸ್ಫೂರ್ತಿಯ ಕೇಂದ್ರವಾಗಿತ್ತು ಎಂದು ಹೇಳಿ ತಮ್ಮ ವಾದವನ್ನು ಬರವಣಿಗೆಗಳಲ್ಲಿ ಪುಷ್ಟೀಕರಿಸುತ್ತಾರೆ. ಹಾಗೆಯೇ ಈ ವೈಚಾರಿಕ ಚೌಕಟ್ಟುಗಳು ಸಮಕಾಲೀನ ಬದುಕಿನ ಬಗ್ಗೆ ಸೃಜನಶೀಲ ಹಾಗೂ ಚಿಂತನೆಯ ಮಾದರಿಗಳನ್ನೇ ಬಳಸಿದ್ದಾರೆ.

ಎಲ್ಲ ಉತ್ತಮ ಕಥೆಗಾರರು ತಮ್ಮದೇ ಆದ ಕಲೆಗಾರಿಕೆಯನ್ನು ರೂಪಿಸಿಕೊಂಡವರೇ. ಕೆಲವರು ಅದನ್ನು ಪ್ರದರ್ಶನ ಮಾಡುವುದಿಲ್ಲ; ಬೇರೆ ಕೆಲವರು ಢಾಳಾಗಿ ತೋರಿಸಿಕೊಳ್ಳುತ್ತಾರೆ. ಸತ್ಯನಾರಾಯಣ ಅವರು ಈ ಎರಡು ಗುಂಪುಗಳಿಗೂ ಸೇರುವುದಿಲ್ಲ. ಈ ಕಥೆಗಾರನಿಗೆ ಅತಿಮಾತುಗಾರಿಕೆ ತನ್ನ ಆತ್ಮವಿಶ್ವಾಸದ ಕೊರತೆಯನ್ನು ತುಂಬಿಕೊಳ್ಳುವ, ಅಧೀರತೆಯನ್ನು ಮರೆಮಾಚುವ ಪ್ರಯತ್ನ. ಆ ಅಧೀರತೆಯು ಕೇವಲ ಕಥೆಗಾರನ ವ್ಯಕ್ತಿತ್ವದ ದೋಷವಾಗಿದ್ದರೇ

ಅದಕ್ಕೆ ಹೆಚ್ಚಿನ ಮಹತ್ವವಿರುವುದಿಲ್ಲ. ಆದರೆ ಅದು ಎಲ್ಲೋ ಒಂದು ಕಡೆ, ತನಗೆ ಸಂಸ್ಕೃತಿಯಲ್ಲಿ ಇದ್ದ ಮಹತ್ವವನ್ನು ಕಳೆದುಕೊಳ್ಳುತ್ತಿರುವ ಕಲಾವಿದನ ಆತಂಕಕ್ಕೆ ಒಡ್ಡಿದ ಪ್ರತೀಕ. ಇಂಥ ಆತಂಕಕ್ಕೆ ಇನ್ನೊಂದು ಕಾರಣವೆಂದರೆ ಇಲ್ಲಿನ ಕಥೆಗಳ ಮೂಲದ್ರವ್ಯವಾದ ಕೆಳಮಧ್ಯಮ ವರ್ಗದ ಅನುಭವಲೋಕವು ಇಂದಿನ ಸಾಹಿತ್ಯಿಕ ಪರಿಸರದಲ್ಲಿ ಕೇಳುವವರಿಲ್ಲದ ಮಗುವಿನಂತೆ ಆಗಿರುವುದು. ಸತ್ಯನಾರಾಯಣ ಅವರು ತಮಗೆ ಪರಿಚಿತವಲ್ಲದ ಆದರೂ ತಮ್ಮ ಕುತೂಹಲವನ್ನು ಕೆರಳಿಸಿರುವ ಅನುಭವಗಳನ್ನು ಹುಡುಕಿಕೊಂಡು ಹೋಗುತ್ತಾರೆ. ಹೀಗೆ ಹೋಗುವಾಗ ಅನೇಕ ಮಾರುವೇಷಗಳನ್ನು ಧರಿಸುತ್ತಾರೆ. ಕೆಂಪಮ್ಮನನ್ನೋ, ಗೌರಿಯನ್ನೋ ಅವರು ನಿರೂಪಿಸುವ ನಿರೂಪಕರು ಅವರದೇ ಪ್ರತಿನಿಧಿಗಳಾಗಿ ಕತೆಗಳಲ್ಲಿ ಕಾಣಿಸುತ್ತಾರೆ. ಕತೆಗಳನ್ನು ಬರೆಯಲು ಸತ್ಯನಾರಾಯಣ ಅವರಿಗೆ ಅವರ ಸ್ನೇಹಿತರುಗಳಾದ ಎನ್.ವಿದ್ಯಾಶಂಕರ್, ಡಾ.ರಾಮಚಂದ್ರದೇವ, ಎಚ್.ಗಿರೀಶ್‌ರಾವ್, ಟಿ.ಎಸ್.ರಘುನಾಥ್ ಇವರುಗಳು ವಸ್ತುನಿಷ್ಠವಾಗಿ ಕತೆಗಳನ್ನು ವಿಮರ್ಶಿಸುವುದರ ಮೂಲಕ ನೆರವಾಗಿದ್ದಾರೆ.

ಸತ್ಯನಾರಾಯಣ ಅವರಿಗೆ ಮನುಷ್ಯನ ಇತಿಹಾಸವನ್ನು ಅರಿಯುವುದರಲ್ಲಿ ಆಸಕ್ತಿಯಿದೆ. ಕಥೆಗಳ ಬೆನ್ನು ಹತ್ತುವುದು ಈ ಗುರಿಯನ್ನು ತಲುಪುವ ದಾರಿ. ಆದರೆ ಸರಾಸರಿ ಅಥವಾ ಪ್ರಾತಿನಿಧಿಕ ಮನುಷ್ಯರನ್ನು ಕುರಿತು ಬರೆಯುವುದರಿಂದ ಇದು ಸಾಧ್ಯವಾಗಲಾರದು. ಸಮಕಾಲೀನ ಚಳುವಳಿಗಳ ಮತ್ತು ಹೊಸ ಸಂವೇದನಾ ಲೋಕಗಳ ಒತ್ತು ಇರುವುದು ಇಂತಹ ಪ್ರತಿನಿಧೀಕರಣದ ಪ್ರಯತ್ನದ ಕಡೆಗೆ. ಎಂದರೆ ಅತ್ಯಂತ ಮಾನವೀಯವಾಗಿ, ಸಹಜವಾಗಿ ಚಿತ್ರಿತವಾಗಿರುವ ಪಾತ್ರಗಳೂ ತಮ್ಮ ವರ್ಣ, ವರ್ಗಗಳ ಪೋಷಾಕನ್ನು ಕಳಚಿರುವುದಿಲ್ಲ. ಬಿಡಿಬಿಡಿಯಾಗಿ ಓದಿದಾಗ ಅದ್ಭುತವೆನಿಸುವ ಕತೆಗಳನ್ನು ಬರೆದಿರುವ ಲೇಖಕರ ಹಲವು ಕಥೆಗಳನ್ನು ಒಟ್ಟಿಗೆ ಓದಿದಾಗ ಏಕತಾನವೆನ್ನಿಸುವುದು ಈ ಕಾರಣದಿಂದಲೇ. ತನ್ನ ನೇರ ಅನುಭವಗಳ ಕಕ್ಷೆಯಿಂದ ಹೊರಬಂದು ಕಲ್ಪನೆಯ ನೆರವಿನಿಂದ ಬರೆಯಲು ತಯಾರಾಗುವ ಲೇಖಕನಿಗೆ ಅನಿವಾರ್ಯ. ಸತ್ಯನಾರಾಯಣ ಅವರು ತಾವು ಅನುಭವಿಸಿದ್ದನ್ನು ಬರೆಯುವುದಕ್ಕಿಂತ ಕಂಡದ್ದನ್ನು, ಕೇಳಿದ್ದನ್ನು ಕಥೆಯಾಗಿಸಲು ಹಾತೊರೆಯುವವರು.

ಸತ್ಯನಾರಾಯಣರವರ ಕಥಾಲೋಕದ ಜಗತ್ತು ಅವರ ನೆಲೆಯಲ್ಲಿ ಸಮಗ್ರವಾಗಲು ಸ್ವಯಂಪೂರ್ಣವಾಗಲು ಪ್ರಯತ್ನಿಸುತ್ತದೆ, ಅಷ್ಟೆ. ಒಂದು ಅನುಭವವನ್ನು ಹಲವು

ಮಗ್ಗುಲುಗಳಿಂದ ನೋಡುವುದೆಂದರೇ ಕೇವಲ ಇಂದ್ರಿಯಗಳ ಕೆಲಸವಲ್ಲ, ಅದು ಬೌದ್ಧಿಕ ಗ್ರಹಿಕೆಗಳಿಂದಲೂ ರೂಪಿತವಾಗುತ್ತವೆ. ಹೀಗೆ ಗ್ರಹಿಸಬೇಕಾದ ಬುದ್ಧಿಯೂ ಸ್ವತಂತ್ರವಲ್ಲ. ಕೊನೆಗೂ ಕಥೆಯು ಕಲಾಕೃತಿಯೊಂದು ನೀಡಬಲ್ಲ ವಿಶಿಷ್ಟ 'ಅನುಭವ'ಕ್ಕಾಗಿ ಮಾತ್ರವೇ ಮುಖ್ಯವಾಗುವುದೇನೋ. ಈ ಸಂಕಲನದ ಕಥೆಗಳು ನೀಡುವ ದರ್ಶನದ ಸತ್ಯವನ್ನು ಒಪ್ಪದಿರುವಾಗಲೂ ಅದರ ಬಹುಮುಖತೆ ಮತ್ತು ಮುಕ್ತತೆಗಳು ಮೆಚ್ಚುಗೆಗೆ ಪಾತ್ರವಾಗಿವೆ.

ಸತ್ಯನಾರಾಯಣ ಅವರ ಕಥೆಗಳಲ್ಲಿನ ಬಗ್ಗೆ ಸಾಮಾನ್ಯವಾಗಿ ಬರುವ ಆಕ್ಷೇಪಣೆಯು ಅವರ ಜಾಣತನ, ಅತಿ ಮಾತುಗಾರಿಕೆ ಮತ್ತು ಅತಿ ಸೂಕ್ಷ್ಮತೆಗೆ ಸಂಬಂಧಿಸಿದ್ದು. ಇದು ಮುಖ್ಯವಾಗಿ ತಂತ್ರದ ಕಾಣಿಸುವಿಕೆ ಮತ್ತು ಮರೆಮಾಚುವಿಕೆಗೆ ಸಂಬಂಧಿಸಿದ್ದು. ಇವರು ಏಕೆ ಇಷ್ಟೊಂದು ಸಮಾಜಮುಖಿ ಸಂದೇಶಗಳನ್ನು ಕೊಡುತ್ತಾರೆ ಎಂಬ ಪ್ರಶ್ನೆ ಓದುಗರನ್ನು ಕಾಡುತ್ತದೆ. ಅವು ಓದುಗನ ದಿಕ್ಕನ್ನು ತೀರ್ಮಾನಿಸುವ ಸಾಧನಗಳೇನೋ ಎನ್ನಿಸುತ್ತದೆ. ವಾಸ್ತವವಾಗಿ ಅದು ಲೇಖಕನು ತನ್ನ ವ್ಯಕ್ತಿನಿಷ್ಠತೆಯನ್ನು ಮೀರಲು ಮಾಡುವ ಪ್ರಯತ್ನ. ಜೊತೆಗೆ 'ತನ್ಮಯ' ಓದುಗರ ಬದಲಾಗಿ 'ಜಾಗೃತ' ಓದುಗರನ್ನು ಸೃಷ್ಟಿಸುವುದು ಅವರ ಬರವಣಿಗೆಗಳ ಉದ್ದೇಶ. ಬದುಕನ್ನು ವಿವಿಧ ನೆಲೆಯಲ್ಲಿ ಮುಖಾಮುಖಿಯಾಗುವ ಕೆ. ಸತ್ಯನಾರಾಣ ಅವರು ಮಾಡಿಸುವ ಜೀವನದರ್ಶನ ಮಾಸ್ತಿಯವರ ಆದರ್ಶಗಳನ್ನು ಹೋಲುತ್ತವೆ. ನಮ್ಮ ಪರಂಪರೆಯೊಂದಿಗೆ ನಮ್ಮ ಬಂಧವನ್ನು ಇನ್ನಷ್ಟು ಗಟ್ಟಿಗೊಳಿಸುತ್ತವೆ. ಈ ಕಾರಣಕ್ಕೆ ಇಲ್ಲಿಯ ಕತೆಗಳು ನಮಗೆ ಇಷ್ಟವಾಗುತ್ತವೆ.

"ಸತ್ಯವಾದದ್ದನ್ನು, ಅಪ್ರಿಯವಾದದ್ದನ್ನು ಹೇಳಲು ಭಯ. ಇದನ್ನೆಲ್ಲ ಹೇಳಲು ಹೊರಟರೆ, ಬರವಣಿಗೆಯ ಸ್ವರೂಪ ಏನಾಗಬಹುದೆಂಬ ಭಯ. ಸಲ್ಲದೆ, ಗೆಲ್ಲದೆ ಹೋಗಬಹುದೆಂಬ ಆತಂಕ ಕೂಡ ಬರವಣಿಗೆಯನ್ನು ಮುಂದೆ ಹಾಕಲು, ಸತ್ಯದಿಂದ ತಪ್ಪಿಸಿಕೊಳ್ಳಲು ಸಹಾಯ ಮಾಡುತ್ತದೆ. ಪ್ರತಿ ತಲೆಮಾರಿಗೂ ಬೇಕಾಗಿರುವುದು ಸತ್ಯವಲ್ಲ, ಬರವಣಿಗೆಯ ಸತ್ವವಲ್ಲ. ತಾನು ಕಾಣಬೇಕೆಂದುಕೊಂಡ, ತನ್ನ ಮನಸ್ಸಿಗೆ ಸುಖ ಕೊಡಬಲ್ಲ ಸತ್ಯದ ಸ್ವರೂಪ ಮತ್ತು ಬರವಣಿಗೆಯ ಆಕಾರ ಮಾತ್ರ".

ಮದುವೆ, ಮನುಷ್ಯ ಸಂಬಂಧಗಳು ಮತ್ತು ವಿಘಟನೆಗೊಳ್ಳುವತ್ತ ಸಾಗುತ್ತಿರುವ ನಮ್ಮ ಕುಟುಂಬ ಪದ್ಧತಿಗಳನ್ನು ಕಾಣುವಾಗ ಸತ್ಯನಾರಾಯಣರ ಈ ಜೀವನದೃಷ್ಟಿ ವಿಶೇಷ ಮಹತ್ವ

ಪಡೆದುಕೊಳ್ಳುತ್ತದೆ. ತಮ್ಮ ಒಂದು ಮುನ್ನುಡಿಯಲ್ಲಿ ಸತ್ಯನಾರಾಯಣರು ಹೇಳುತ್ತಾರೆ, " ಗಂಡು ಹೆಣ್ಣು ಎರಡೂ ಕೂಡಿ ಕಟ್ಟಬೇಕಾದ ಬದುಕು ಬಾಳು ಒಂದಿರುತ್ತದೆ ಎಂಬ ವಿಚಾರವನ್ನು ನಾವು ಈ ಕಾಲದಲ್ಲಿ ಒಪ್ಪುತ್ತೇವೆಯೇ- ಇದನ್ನು ಒಪ್ಪದಿದ್ದರೆ ದಾಂಪತ್ಯದ ವೈಫಲ್ಯದ ಬಗ್ಗೆ ತಲೆಕೆಡಿಸಿಕೊಳ್ಳಬೇಕಾದ ಅಗತ್ಯವೇ ಇಲ್ಲ. ದಾಂಪತ್ಯದೊಳಗೆ ಗಂಡು-ಹೆಣ್ಣಿನ ಸಂಬಂಧ ಯಾಂತ್ರಿಕವಾಗುತ್ತದೆ, ಎಂದು ಹೇಳುವವರು ಕೂಡ ಯಾವ ಮನುಷ್ಯ ಸಂಬಂಧ ತಾನೇ ದೀರ್ಘ ಕಾಲಾವಧಿಯಲ್ಲಿ ಪ್ರತಿದಿನವೂ ಪ್ರತಿಕ್ಷಣವೂ ಬೆಚ್ಚನೆಯ ಪ್ರೀತಿಯಿಂದ ನಳನಳಿಸುತ್ತಿರುತ್ತದೆ, ಎಂದು ಇದುವರೆಗೆ ಹೇಳಿಲ್ಲ. ಅತಿಯಾದ ಆತ್ಮಪ್ರತ್ಯಯಕ್ಕೆ ಮಿತಿಯಿರುವಂತೆ ಕೌಟುಂಬಿಕ ಛಕಟ್ಟಿಗೂ ಮಿತಿಯಿದೆ. ಕೌಟುಂಬಿಕ ಜೀವನವನ್ನು ವಿಶಾಲವಾದ ಸಮುದಾಯದೊಡನೆ ಬೆಸೆಯುವ ಒಂದು ಮಜಲಾಗಿ ನಮ್ಮಲ್ಲಿ ನೋಡುತ್ತಿದ್ದರು. ನವಮಧ್ಯಮವರ್ಗದವರಿಗೆ ತಾವು ಮತ್ತು ತಮ್ಮ ಕುಟುಂಬದಾಚೆಗೆ ಏನೂ ಕಾಣದು. ವಿಶಾಲವಾದ ಸಮುದಾಯದೊಡನೆ ಬೆರೆಯುವ ಒತ್ತಾಸೆಯಿಲ್ಲದರಿಂದಲೂ ಗಂಡು ಹೆಣ್ಣಿನ ಸಂಬಂಧ, ಕೌಟುಂಬಿಕ ಚೌಕಟ್ಟು ಎರಡರಲ್ಲೂ ಶಿಥಿಲತೆ ಕಂಡು ಬಂದಿರಬಹುದು.

ಕತೆಯ ಕೊನೆಯಲ್ಲಿ "...... ಆದರೆ ನಿಮ್ಮಂತೋರಿಗೆ ಕತೆ ಅರ್ಥವಾಗುವುದು ಮಾತ್ರವಲ್ಲ, ನಿಮ್ಮಲ್ಲೇ ಆ ಕತೆ ಮುಂದುವರೆಯೋದು. ಆದದ್ದರಿಂದ ಅದನ್ನು ಹೇಳಬೇಕಾಗಿ ಬಂದಿದೆ. ಹಾಗೆ ನೋಡಿದರೆ, ನೀವು ಈ ಕತೆಯ ಕೇಳುಗರು ಮಾತ್ರವಲ್ಲ, ಕತೆಯೊಳಗಿನ ಬದುಕಿಗೆ ವಾರಸುದಾರರು ಕೂಡ. ನಾನಾಗಲೀ, ನನ್ನಂಥವರಾಗಲೀ ಹರಿಕತೆ ದಾಸರ ತರ ಕತೆ ಹೇಳತೀವಿ, ಗೊತ್ತಿದೆ ಅನ್ನುವ ಕಾರಣಕ್ಕೆ, ಮುಂದುವರಿಸೋಕೆ ಬೇಕಾದ ಮನೋಧರ್ಮ ಇಲ್ಲ. ನಿಯತ್ತಿಲ್ಲ ನಮ್ಮಲ್ಲಿ. ಅದೂ ಅಲ್ಲದೆ ಯಾರ ಕತೆ ಯಾರಲ್ಲಿ ಯಾವಾಗ ಮುಂದುವರಿಯುತ್ತೆ, ಹೇಗೆ ಮುಂದುವರಿಯುತ್ತೆ ಅಂತ ಹೇಳೋಕೆ ಒಂದು ನಿಯಮವಾದರೂ ಎಲ್ಲಿದೆ, ಹೇಳಿ." ಎಂಬ ಮಾತಿದೆ. ಸಾಹಿತಿಗಳಿಗೆ ಅಥವ ಓದುಗರಿಗೂ ಈ ಕತೆಗಳೆಲ್ಲ ಮುಖ್ಯ ಅನಿಸಲೇ ಬೇಕಿಲ್ಲ. ಹಾಗೆ ಅನಿಸುವಂತೆ ಮಾಡಬಹುದಾದಂತ ಯಾವುದೋ ಸಾಕ್ಷಿ ನಮ್ಮಲ್ಲಿ ಇಲ್ಲದೇ ಇರಬಹುದು. ಅದನ್ನು ಕುರಿತು ಸತ್ಯನಾರಾಯಣರು ಇಲ್ಲಿನ ಕತೆಗಳಲ್ಲಿ ಹೇಳುತ್ತಿದ್ದಾರೆ ಅನಿಸುತ್ತದೆ.

ಸತ್ಯನಾರಾಯಣ ಅವರ ಕತೆಗಳು ಸಾಮಾನ್ಯ ಮತ್ತು ತರಬೇತಿಯನ್ನು ಪಡೆದ ಓದುಗರಿಬ್ಬರಿಗೂ ಇಷ್ಟವಾಗುವಂತಿವೆ. ಸಣ್ಣಕತೆ, ಸಾಮಾಜಿಕ-ಸಾಂಸ್ಕೃತಿಕ ಚಿಂತನೆ, ವಿಶ್ಲೇಷಣೆ ಇತ್ಯಾದಿಗಳು ಒಂದರೊಳಗೊಂದು ಕಲೆಸಿಕೊಳ್ಳುತ್ತಲೇ, ಅವು ಯಾವುದೂ ಆಗದೆ ವಿನ್ಯಾಸಗೊಳ್ಳುತ್ತಿರುವ ಇಲ್ಲಿನ ಕತೆಗಳು ಒಂದು ರೂಪವಾಗಿ ನಿಖರತೆಯನ್ನು ಪಡೆಯುವ ಪ್ರಕ್ರಿಯೆಯಲ್ಲಿರುವಂತಿದೆ. ಇವರ ಕತೆಗಳ ಹೂರಣ; ಅದನ್ನು ಅವರು ನೋಡುವ ಗ್ರಹಿಸುವ ರೀತಿ, *ಸಮಕಾಲೀನ ಬದುಕಿನ ಆತಂಕ, ತಳಮಳ ಸೂಕ್ಷ್ಮಗಳನ್ನು ಮಂಡಿಸುವಲ್ಲಿ ಅವರು ತೋರುವ ತೆರೆದ ಮನಸ್ಸು; ಅದರಿಂದಾಗಿ ಅವರ ಬರಹಕ್ಕೊದಗಿ ಬರುವ ಒಳನೋಟ, ಅನುಭವವನ್ನು ನೋಡುವ, ಗ್ರಹಿಸುವ ಪರಿ-ಇಲ್ಲಿಯವರೆಗೂ ನಮ್ಮ ಗಮನಕ್ಕೆ ಬಾರದಿದ್ದ, ಗಮನಿಸಿದ್ದರೂ ನಮಗೆ ಹೊಳೆಯದಿದ್ದ ಅನುಭವದ ಮುಖಗಳನ್ನು ತೋರಿಸುವ ಅವರ ರೀತಿ, ಮಂಡಿಸುವ- ಅಂದರೆ ವಿನ್ಯಾಸಗೊಳಿಸುವ ಕ್ರಮ; ಅವರ ಕತೆಗಳು ವ್ಯಂಗ್ಯ, ತಮಾಷೆ ಮತ್ತು ಲೇವಡಿಯ ಧಾಟಿಯಲ್ಲಿದ್ದರೂ ಬದುಕನ್ನು ಗಂಭಿರವಾಗಿ ಪರಿಶೀಲಿಸುತ್ತಿರುವ ಅವುಗಳ ಹದ; ಆತ್ಮೀಯ-ನಾಟಕೀಯ ನಿರೂಪಣೆ, ಅನಾಯಾಸ, ನಿರರ್ಗಳವಾಗಿ ಮಾತನಾಡುತ್ತಿವೆ ಎನ್ನಿಸಿದರೂ ಅವುಗಳ ಭಾಷೆಯ ಪಾರದರ್ಶಕತೆ; ಲವಲವಿಕೆ ಇತ್ಯಾದಿಗಳಿಂದ ಕನ್ನಡದ ಹಲವು ಕತೆಗಳಂತೆ ಕೇವಲ ಮಾಹಿತಿ, ವಿವರ-ವಿರಣೆ, ಘಟನೆ, ಸಂಗತಿ ಮತ್ತು ವ್ಯಕ್ತಿ ಚಿತ್ರಣಗಳದೇ ಸಮಾಜ ಮತ್ತು ಸಂಸ್ಕೃತಿಯ ಒಳಗಿನ ಸೂಕ್ಷ್ಮವಿನ್ಯಾಸ ಮತ್ತು ಗತಿಗಳನ್ನು ಅನಾವರಣಗೊಳಿಸುವ ಕಾಳಜಿ ಇತ್ಯಾದಿಗಳಿಂದ ಅವುಗಳಿಗೆ ಒಂದು ಪಾಕ ಮತ್ತು ವಿಶಿಷ್ಟತೆ ಪ್ರಾಪ್ತವಾಗಿರುವಂತಿದೆ. ಅಂದರೆ ಅವು ಏಕಕಾಲದಲ್ಲಿ ಸಂಸ್ಕೃತಿಯ ದಾಖಲೆ ಮತ್ತು ವಿಶ್ಲೇಷಣೆ ಮತ್ತು ವಿಮರ್ಶೆಯೂ ಆಗಿವೆ.

ಒಟ್ಟಾರೆ ಸತ್ಯನಾರಾಯಣ ಅವರು ಖಾಸಗೀ ಹಾಗೂ ಸಾಹಿತ್ಯಕ ಬದುಕಿನ ಸ್ಥೂಲ ಚಿತ್ರಣಗಳನ್ನು ಕಟ್ಟಿಕೊಡುವ ಪ್ರಯತ್ನವನ್ನು ಅವರ ಭಾವಗಳ ನವುರಾದ ಅಭಿವ್ಯಕ್ತಿ ಸಾಧ್ಯತೆಗಳಿಂದ ಸಾಹಿತ್ಯ ಕ್ಷೇತ್ರದಲ್ಲಿ ಹೊಸ-ಹೊಸ ಛಾಪು ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ.

* 'ಲೋಕಪ್ರಬಂಧ' ಗೀತಾಂಜಲಿ ಪಬ್ಲಿಕೇಷನ್ಸ್ ಬೆಂಗಳೂರು......

## ಅಧ್ಯಾಯ–೩

## ಕಥಾವಸ್ತುವಿನ ಆಯ್ಕೆ ಮತ್ತು ನಿರೂಪಣಾ ಕೌಶಲ

ಸತ್ಯನಾರಾಯಣ ಅವರ ಪ್ರತಿಯೊಂದು ಕಥೆಗಳ ಹಿಂದೆಯೂ ಅವರ, ಭಾವನೆಗಳಿಂದ ಆರ್ದ್ರವಾದ, ಆದರೆ ಬೇಗ ಬೇಗ ಎಲ್ಲವನ್ನು ಹೇಳಿಬಿಡಬೇಕೆಂಬ ಅವಸರ ಆತುರಗಳಿಂದಲೇ ಭಾವರಹಿತವೆನಿಸುವ ಧ್ವನಿಯನ್ನು ನೋಡಬಹುದು. ಇವರ ಕಥಾಸಂಕನಗಳ ಬಹುಪಾಲು ಕಥೆಗಳು ಹೊಸ ತಿಳುವಳಿಕೆಯನ್ನು ಕೊಡುತ್ತವೆ. ಹಾಗೆಯೇ ಓದುಗರ ಮನಸ್ಸನ್ನು ಇನ್ನಷ್ಟು ಮಾರ್ದವ ಮತ್ತು ಸಹನೆಗಳನ್ನು ರೂಢಿಸಿಕೊಳ್ಳಲು ನೆರವಾಗುತ್ತವೆ. ನಾನುಮಾತ್ರ ಸರಿ ಎಂಬ ಅಹಂಕಾರವನ್ನು ಕಡಿಮೆ ಮಾಡಿ, ದುರಾಸೆ, ಸ್ವಾರ್ಥಗಳು ತುಂಬಿದ ಗುರಿ ತಪ್ಪಿದ ಜೀವನ ಕ್ರಮಕ್ಕಿಂತ ಭಿನ್ನವಾದುದರಲ್ಲಿ ಓದುಗರಿಗಿರುವ ಪ್ರೀತಿಯನ್ನು ಹೆಚ್ಚಿಸಿವೆ. ಇವರು ಬರೆದಿರುವ ಕಥೆಗಳಲ್ಲಿ  ಬಂದು ಹೋಗುವ ಹೆಂಗಸರು ಗಂಡಸರು ನಮ್ಮ ನೆರಮನೆಯಯವರಿಗಿಂತ ಆತ್ಮೀಯರಾಗುವ, ತಮ್ಮ ರೋಗಗಳ ನಿರೂಪಣೆಯ ಮೂಲಕವೇ ನಮಗೂ ಔಷಧ ಕೊಡುವ ಕೆಲಸ ಮಾಡಿದ್ದಾರೆ.

ಸತ್ಯನಾರಾಯಣ ಅವರ ಕಥೆಗಳು ನೂರಕ್ಕೆ ನೂರರಷ್ಟು ನವ್ಯ ಹಾಗೂ ಆಧುನಿಕ ಕಾಲದ ಕಥೆಗಳು. ಕಳೆದ ಎರಡು ಮೂರು ದಶಕಗಳಲ್ಲಿ ಕನ್ನಡ ಸಮುದಾಯವು ಅನುಭವಿಸಿದ ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗಳು ಇಲ್ಲಿ ನೂರಾರು ಮಾನುಷಿಕ ವಾಸ್ತವತೆಗಳ ಮೂಲಕ ಮೈದಳೆದಿವೆ. ಹಾಗೆ ನೋಡಿದರೆ ಇಲ್ಲಿನ ಪ್ರತಿಯೊಂದು ಕಥೆಯೂ ಉಪಕಥೆಗಳ ಜಾಲದ ಮೂಲಕ ಮೈದಳೆಯುವ ಕಥಾನಕ. ಅದೂ ನಿಜವಲ್ಲ. ಹತ್ತು ಕಥೆಗಳನ್ನು ತನ್ನೊಳಗೆ ಅಳವಡಿಸಿಕೊಂಡಿರುವ ಸಂಕಥನಕದ ಮೂಲಕ, ಈ ಕಾಲದ ಬದುಕಿನ ಒಂದು ವ್ಯಾಖ್ಯಾನವು ಇಲ್ಲಿ ಒಡಮೂಡಿದೆ. ಈ ವ್ಯಾಖ್ಯಾನವು ತನ್ನ ಕನ್ನಡಕದ ಬಣ್ಣಕ್ಕೆ, ಮೂಗಿನ ನೇರಕ್ಕೆ ಅನುಗುಣವಾಗಿ ಜಗತ್ತನ್ನು ತಿದ್ದಿತೀಡುವ ಮನೋಧರ್ಮದಿಂದ ಮೂಡುವುದಿಲ್ಲ. ಇದು ಎಲ್ಲರನ್ನು ಪ್ರೀತಿಸುವ ಹಾಗೂ ಮನುಷ್ಯ ಜಾತಿಯ ಶಾಶ್ವತಗಳು ಮತ್ತು ಚಲನಶೀಲತೆಯನ್ನು ಒಟ್ಟಾಗಿ ಕೂಡಿಸುವುದರಲ್ಲಿ ಯಶಸ್ವಿಯಾಗಿರುವುದರಿಂದ ಇವು ಎಲ್ಲಾ ಕಾಲಕ್ಕೂ ಸಲ್ಲುವ ಕಥೆಗಳಾಗಿವೆ. ಸತ್ಯನಾರಾಯಣ ಅವರ ಕಥೆಗಳನ್ನು ಓದಿದ ಮೇಲೆ ಅದು ಯಾರ ಕಥೆ ಮತ್ತು ಯಾರ ಗ್ರಹಿಕೆಗೆ ಅನುಗುಣವಾದ ಕತೆ ಎಂಬ ಗೊಂದಲಗಳು

ಶುರುವಾಗಿ, ನಮ್ಮ ನೆನಪಿನಲ್ಲಿ ಕತೆ ಹಲವು ಬಣ್ಣಗಳನ್ನು ಪಡೆದುಕೊಳ್ಳುತ್ತವೆ. ಯಾರೋ ಯಾರಿಗೋ ಹೇಳಿದ ಕಥೆಯನ್ನು ಈಗ ನಾನು ನಿಮಗೆ ಹೇಳುತ್ತಿದ್ದೇನೆ ಎಂಬ ಅವರ ತಂತ್ರ ಪುರಾಣಗಳಷ್ಟು ಹಳೆಯದಾಗಿದೆ.

ಸತ್ಯನಾರಾಯಣ ಅವರ ಕಥೆಗಳಲ್ಲಿ ಕಾಣುವ ವೈಶಿಷ್ಟ್ಯವೇನು ಎಂದು ನೋಡುವುದಾದರೆ, ಇವರ ಕಥೆಗಳಲ್ಲಿ ಸತ್ಯ ಮತ್ತು ಮಿಥ್ಯಗಳ ಸರಳ ವಿಭಜನೆ ಇರುವುದಿಲ್ಲ. ಯಾವುದು ಸತ್ಯ ? ಯಾವುದು ಸುಳ್ಳು ? ನಮ್ಮ ಅರಿವಿಗೆ ಬಂದಷ್ಟು ಮಾತ್ರ ಸತ್ಯವೋ? ಎಂಬ ಈ ಪ್ರಶ್ನೆಗೆ ಇವರ ಕಥೆಗಳಲ್ಲಿ ಸ್ಪಷ್ಟ ಉತ್ತರವಿಲ್ಲ. ಪ್ರಸ್ತುತ ಕಥಾಸಂಕಲನದ 'ಮಾರ್ಕ್ ಟುಲಿ ಹೇಳಬೇಕಾಗಿ ಬಂದ ಶ್ರೀ ರಾಮಚಂದ್ ಕತೆ' ಈ ಸಂದಿಗ್ಧವನ್ನೇ ಪರಿಶೀಲಿಸುತ್ತದೆ. ಈ ಕತೆಯ ನಿರೂಪಕ ಮಾರ್ಕ್‌ಟುಲಿ ವರದಿಗಾರ : ನೋಡುವುದು ಅವನಿಗೆ ಸಹಜ ಕ್ರಿಯೆಯಾಗಿರುವಂತೆ, ಉದ್ಯೋಗವೂ ಹೌದು. "ಏನೇನು ಕನಸು ಕಟ್ಟಿಕೊಂಡು ಬಂದರೂ ಎದುರಿಗೆ ಕಾಣ್ತಾ ಇರೋದನ್ನು ನೋಡಬೇಕಲ್ಲ" ಎಂಬ ಅನಿವಾರ್ಯತೆಯನ್ನು ಟುಲಿ ಒಪ್ಪಿಕೊಂಡವನು. ಈ ಮಾತನ್ನು ಆತ ಹೇಳುತ್ತಿರುವುದು ಬದಲಾಗುತ್ತಿರುವ ಮೇಲುಕೋಟೆಯ ಬಗ್ಗೆ. ಆ ಊರಿನ ದೇವಸ್ಥಾನಗಳು, ಮಡಿಯುಟ್ಟ ಶ್ರೀ ವೈಷ್ಣವ ಬ್ರಾಹ್ಮಣರು, ವಿಶಿಷ್ಟ ನೆಯ್ಗೆಯ ಪಂಚೆ, ಇತ್ಯಾದಿಗಳನ್ನು ಮಾತ್ರ ನೋಡಲು ಬಂದ ಟೂರಿಸ್ಟ್ ಮನೋಧರ್ಮದವರಿಗೆ ಅವು ಕಾಣಿಸುತ್ತವೆ. ಆದರೆ ಮೇಲುಕೋಟೆಯ ಈ 'ವೈಶಿಷ್ಟ್ಯ'ಗಳು ಆಧುನಿಕ ಜೀವನ ಕ್ರಮದಿಂದ 'ಮಲಿನ'ವಾಗಿವೆ. ಈ 'ಮಾಲಿನ್ಯ' ನೋಡುವವನ ದೃಷ್ಟಿಯಲ್ಲೇ ಇರುವಂತಹದ್ದೋ? ಅಥವಾ ಅದೇ ಆ ಸಂಗತಿಗಳ ಗುಣವೋ? ಈ ಪ್ರಶ್ನೆಯನ್ನು ಹಾಕಿಕೊಂಡೇ ಟುಲಿ ಅಲ್ಲಿನ ವಿವರಗಳನ್ನು ನೋಡುತ್ತಿದ್ದಾರೆ. ಮೇಲುಕೋಟೆಯ ಜನ ಕೂಡ ಬದುಕಬೇಕು; ಟೂರಿಸ್ಟರ ನೋಟಕ್ಕೆ ಒಡ್ಡಿಕೊಂಡ ವಸ್ತುಗಳಾಗಿ ಇರಲು ಸಾಧ್ಯವಿಲ್ಲ ಎಂಬ ಸತ್ಯವನ್ನು ಟುಲಿ ಮನಗಂಡಿದ್ದಾರೆ. ಯಾಕೆಂದರೆ ಟುಲಿ ತನ್ನ ವ್ಯಕ್ತಿಗತ ಅನುಭವದಿಂದ ಮಾತ್ರ ಮಾತನಾಡುತ್ತಿಲ್ಲ. ಆತನ ಹಿಂದೆ ಇಂಗ್ಲೆಂಡ್ ಇದೆ; ಬಿ.ಬಿ.ಸಿ. ಯಂತಹ ಸಂಸ್ಥೆ ಇದೆ. ಅಲ್ಲದೆ ಕತೆಯನ್ನು ಸೂಕ್ಷ್ಮವಾಗಿ ನೋಡಿದರೆ ಬದಲಾವಣೆಯ ಕುರಿತು ಕರ್ನಾಟಕದಲ್ಲಿ ಈ ಒಂದೆರಡು ದಶಕಗಳಲ್ಲಿ ನಡೆದ ಚರ್ಚೆಯನ್ನು ಕೂಡ ಟುಲಿ ವಿಮರ್ಶೆ ಮಾಡುತ್ತಿರುವುದು ಕಾಣುತ್ತದೆ.

ಸತ್ಯನಾರಾಯಣ ಅವರ ಕಥಾವಸ್ತುವಿನ ವಿಶೇಷತೆಯೆಂದರೇ, ಅವರ ಕತೆಗಗಳ ಊರುಗಳು. ಮಾರ್ಕಟುಲಿ ಕತೆಯಲ್ಲಿನ ಮೇಲುಕೋಟೆ, 'ನಜೀರಸಾಬು ಕತೆಯ ಬಿಸಿಲವಾಡಿ', ಮತ್ತು 'ನಿಮ್ಮ ಮೊದಲ ಪ್ರೇಮದ ಕತೆ'ಯ ಊರುಗಳು ದೊಡ್ಡ ನಗರಗಳಲ್ಲ. ಹಾಗೆಂದು ತೀರಾ ಹಳ್ಳಿ ಕೊಂಪೆಗಳೂ ಅಲ್ಲ. ಆಧುನಿಕತೆಗೆ ಒಗ್ಗಿಕೊಳ್ಳಲಾಗದಂತಹ ಈ ಊರುಗಳ ಬದುಕು ಸಾಂಸ್ಕೃತಿಕ ಸಂದಿಗ್ಧದಲ್ಲಿ ರೂಪುಗೊಳ್ಳುತ್ತವೆ. 'ನಜೀರ ಸಾಬು ಕತೆ'ಯಲ್ಲಂತು ಪ್ರಧಾನ ಪಾತ್ರವಿರುವುದೇ ಈ ಸಂದಿಗ್ಧತೆಗೆ. ಈ ಕಥಾ ಸಂಕಲನದ ಇತರ ಕಥೆಗಳಂತೆ ಈ ಕಥೆಯಲ್ಲಿಯೂ ನೇರ ಕಥನವಿಲ್ಲ. ಗೃಹಸ್ಥರೊಬ್ಬರು ಕತೆಗಾರರನ್ನು ಕೂರಿಸಿಕೊಂಡು ಹೇಳಿದ ಕತೆ. ಈ ಅಂಶವನ್ನು ಕೂಡ ಗಮನಿಸಬೇಕು. ಸತ್ಯನಾರಾಯಣರ ಕತೆಗಳನ್ನು ಹೇಳುವವರು ತರುಣರಲ್ಲ. ಮಧ್ಯವಯಸ್ಸಿನ ಆಚೆ ಈಚೆ ಇರುವವರು. ಗಾಢ ಅನುಭವವನ್ನು ಕೂಡ ದೇಶಾವರಿ ಮಾತುಗಳಲ್ಲಿ ಹೇಳುವಷ್ಟು ಪಳಗಿದವರು. 'ನಜೀರಸಾಬು ಕತೆ'ಯ ಸೀತಾ ಲಕ್ಷ್ಮಿಯ ಆಶೆ ಆಕಾಂಕ್ಷೆಗಳು, ಸಹಜವೂ ನ್ಯಾಯವೂ ಆಗಿರುವಂತಹವು. ಆದರೆ ೮೦ರ ದಶಕದಲ್ಲಿ ಕೂಡ, ಕರ್ನಾಟಕದ ಸಣ್ಣ ಊರೊಂದರಲ್ಲಿ ಅವು ಸ್ವಲ್ಪ ಅಡ್ಡಾದಿಡ್ಡಿಯಾಗಿ ಮತ್ತು ಧಿಮಾಕಿನದ್ದಾಗಿ ಕಾಣುತ್ತವೆ. ಸೀತಾಲಕ್ಷ್ಮಿಯ ಆಸೆಗಳು ಮತ್ತು ಮಿತಿಗಳ ಮೂರ್ತರೂಪವೇ ಬಿಸಿಲವಾಡಿಯಲ್ಲಿ ಆಕೆ ವಾಸವಾಗಿದ್ದ 'ಅರ್ಧಭಾಗ ತಾರಸಿ, ಅರ್ಧಭಾಗ ಹಂಚಿನ ಮನೆ'. ನವೋದಯ ಕಾಲದಿಂದ ಇಂದಿನವರೆಗೆ ಹಲವು ಲೇಖಕರು ಹೇಳಿರುವ ಈ ಸುದೀರ್ಘ ಕತೆಯಲ್ಲಿ ಎಲ್ಲರೂ, ಎರಡು ಸಂಸ್ಕೃತಿಗಳ ದೋಣಿಗಳಲ್ಲಿ ಕಾಲಿಟ್ಟು ತೊಳಲಾಡಿದವರೇ. ಆದರೆ ಕತೆ ಹೇಳುವವರ ತೀರ್ಮಾನಗಳೇ ಸತ್ಯನಾರಾಯಣರ ಕತೆಗಳ ಅಂತಿಮ ತೀರ್ಮಾನವಲ್ಲ. ಯಾಕೆಂದರೆ ಅವುಗಳನ್ನು ಕೇಳಿಸಿಕೊಂಡ ನಿರೂಪಕ ತನಗೆ ಅನ್ನಿಸಿದ್ದನ್ನೂ ಕತೆಗೆ ಸೇರಿಸಿ ಹೇಳಿದ್ದಾರೆ. 'ಸತ್ಯನಾರಾಯಣರವರ ಕತೆಯೊಳಗೆ ಇನ್ನೊಂದು ಕತೆಯಿರುತ್ತದೆ; ಅದರೊಳಗೆ ವೃತ್ತಾಂತ. ಇವರ ಕತೆಗಳಲ್ಲಿ ನಾವು ಕಾಣುವುದು ನಮ್ಮ ಪ್ರತಿರೂಪವನ್ನೇ. ಇವರ ಕಥೆಗಳನ್ನು ಓದಿ ಮುಕ್ತಾಯದ ಹಂತಕ್ಕೆ ಬರುವುದು ಅಂದರೆ, ಹಗಲೆಲ್ಲಾ ಊರು ಸುತ್ತಿ ಸಂಜೆ ಮತ್ತೆ ಅದೇ ಮಂಕು ಹಿಡಿಸುವ ನಮ್ಮ ಮನೆ ಒಳ ಹೊಕ್ಕ ಹಾಗೆ.

ಸತ್ಯನಾರಾಯಣ ಅವರು ತಮ್ಮ ಕತೆಗಳ ಮಟ್ಟಿಗೆ ಮಹತ್ವಾಕಾಂಕ್ಷಿ. ಇವರು ಕೂಡ, ತಮ್ಮ ಕತೆಗಳ ಕನ್ನಡಿಯಲ್ಲಿ ನಿಜಸ್ಥಿತಿಯನ್ನು ಕಾಣಲು ಮತ್ತು ಕಾಣಿಸಲು ಹವಣಿಸುವವರು.

ಇವರ ಕತೆಗಳಲ್ಲಿ ಸಾಮಾನ್ಯವಾಗಿ ಒಂದು ಮಾತು ಬರುತ್ತದೆ. " ಯಾರದೋ ಕತೆ ಹೇಳ್ತಿನಿ, ಯಾವುದೋ ಕತೆ ಹೇಳ್ತೀನಿ ಅಂತ ಹೋಗಿ ಕೊನೆಗೂ ಹೇಳುವುದು ಅವರವರ ಕತೆಯನ್ನೇ". ಈ ಮಾತು ಅವರ ಎಲ್ಲಾ ಕತೆಗಳಿಗೂ ಹೊಂದಿಕೊಳ್ಳುತ್ತದೆ. ಆದರೆ ತಾನು ಹೇಳುತ್ತಿರುವ ಈ ಮತ್ತೊಬ್ಬನ ಆತ್ಮ ಚರಿತ್ರೆಯಲ್ಲಿಯೂ ಲೇಖಕನಿಗೆ ಒಂದು ಸಚಿದೇಹವಿದೆ. ಇವರ ಕತೆಗಳಲ್ಲಿ ಗೃಹಸ್ಥರು ನಿರಾಳವಾಗಿ ಹೇಳುವ ಕತೆಗೂ, ನಿರೂಪಕ ನಮಗೆ ಪುನಃ ಹೇಳುವ ಅದೇ ಕತೆಗೂ ಇರುವ ವ್ಯತ್ಯಾಸವೇ ಈ ಸಂದೇಹ ಮತ್ತು ಅದು ಸೂಚಿಸುವ ಎಚ್ಚರ.

ನವ್ಯ ಕತೆಗಾರರು ಬಹುಮಟ್ಟಿಗೆ ತಮ್ಮ ಕಥೆಯನ್ನು ಹೇಳುವುದರಲ್ಲಿ ಆಸಕ್ತರಾಗಿದ್ದರು. ಅಲ್ಲಿನದು ನಾಯಕಕೇಂದ್ರಿತ ಅನುಭವ. ಉಳಿದ ಪಾತ್ರಗಳು ಅವನ ಅನುಭವಕ್ಕೆ ಆಕೃತಿಯನ್ನು ಕೊಡಲು ನೆರವಾಗುವವರು ಮಾತ್ರ. ಸಾಮಾಜಿಕ ವಿಶ್ಲೇಷಣೆ ಹಾಗೂ ಪ್ರೇರಣೆಗಳು ಇದ್ದರೂ ಅವು ಪಾತ್ರಗಳ ಅನುಭವಗಳಲ್ಲಿ ಶೋಧಿತವಾಗಿಯೇ ಬರುತ್ತಿದ್ದವು. ಇದಕ್ಕೆ ವಿರುದ್ಧವಾಗಿ ಕಳೆದೆರಡು ದಶಕಗಳಲ್ಲಿ ಮೂಡಿಬಂದ ಅನೇಕ ಕಥೆಗಳಲ್ಲಿ ಸಮುದಾಯವೇ ನಾಯಕ. ವ್ಯಕ್ತಿಗಳೇನಿದ್ದರೂ ಆ ಸಮೂಹದ ಪ್ರಾತಿನಿಧಿಕ ಮಾದರಿಗಳನ್ನು ಪರಿಚಯ ಮಾಡಿಕೊಡುವವರು. ಸತ್ಯನಾರಾಯಣ ಅವರು ಇವೆರಡರ ಮಧ್ಯದ ಇಕ್ಕಟ್ಟಿನ ದಾರಿಯನ್ನು ಆರಿಸಿಕೊಂಡಿದ್ದಾರೆ. ಇಲ್ಲಿನ ನಿರೂಪಕನಿಗೆ ಕಾಣುವಿಕೆ ಮತ್ತು ಗ್ರಹಿಸುವಿಕೆಗಳು ಒಂದೇ ನಾಣ್ಯದ ಒಂದೇ ಮುಖ. ಅಷ್ಟೇ ಅಲ್ಲ, ಅವನ ಮಟ್ಟಿಗೆ ಹೇಳುವುದಕ್ಕೂ ಕಾಣುವುದಕ್ಕೂ ಹೆಚ್ಚಿನ ವ್ಯತ್ಯಾಸವಿಲ್ಲ. ಏಕೆಂದರೆ ಅವರು ಸದಾ ಅನುಭವವನ್ನು ಫಿಲ್ಟರ್ ಮಾಡುವ ಅಥವಾ ಶೋಧಿಸುವ ಕೆಲಸದಲ್ಲಿ ತೊಡಗಿರುತ್ತಾರೆ. ಇನ್ನೊಂದು ಮಹತ್ವದ ಮಾತೆಂದರೆ ಈ ಕತೆಗಾರನ ಕಾಣ್ಕೆಯೂ ರೂಪಿತವಾಗುವುದು ಅನುಭವಗಳ ಜೋಡಣೆಯಲ್ಲಿ. ಬಿಡಿಬಿಡಿಯಾಗಿ ತೆಗೆದುಕೊಂಡಾಗ ಏನೂ ಆಗದಿರಬಹುದಾದ ವಿವರಗಳು ಒಂದು ಇನ್ನೊಂದರ ಬೆಳಕಿನಲ್ಲಿ ಬೆಳಗುತ್ತವೆ.

ನದಿಯೊಂದು ಹರಿಯುತ್ತ ತನ್ನ ಹರಿವಿನುದ್ದಕ್ಕೂ ಅನೇಕರಿಗೆ, ಅನೇಕ ರೀತಿಯಲ್ಲಿ ಜನರ ಜೀವನ ಕಟ್ಟಿಕೊಳ್ಳುವಲ್ಲಿ ಸಹಾಯ ಮಾಡುತ್ತದೆ. ಹಾಗೆಯೇ ಮಹಾನ್ ವ್ಯಕ್ತಿಗಳು ತಮ್ಮ ಜೀವನದುದ್ದಕ್ಕೂ ತಮಗೆ ಅರಿವಿಲ್ಲದೇ ಹಾಗೂ ಅರಿವಿನೊಂದಿಗೆ ಅನೇಕ ರೀತಿಯಲ್ಲಿ ಸಹಾಯ ಮಾಡುತ್ತ ಸಾಗಿರುತ್ತಾರೆ. ಕೆಲವು ಬೆಳಕಿಗೆ ಬಂದರೆ ಇನ್ನು ಕೆಲವು ಬೆಳಕಿಗೆ ಬಾರದೇ

ಯಾರಿಗೂ ತಿಳಿಯದೇ ನಶಿಸಿ ಹೋಗುತ್ತವೆ. ಮುದುಕಿ ಹೇಳಿದ ಸರ್ ಎಂ.ವಿ. ಕಥೆ, ಸರ್.ಎಂ.ವಿ. ತಿಳಿದ ಮುದುಕಿ ಕಥೆಯಲ್ಲಿ ಲೇಖಕರು ಸರ್.ಎಂ.ವಿ. ಅವರಿಂದ ಸಹಾಯ ಪಡೆದ ಮುದುಕಿಯೊಬ್ಬಳ ಕಥೆಯನ್ನು ಹೆಣೆದುಕೊಟ್ಟಿದ್ದಾರೆ. ಕಥೆಯ ಆರಂಭ ನೈಜ ಸಂಗತಿ ಆಧರಿಸಿದ್ದಾದ್ದರಿಂದ ಸರಾಗವಾಗಿ ಸಾಗುತ್ತದೆ. ಲೇಖಕರು ತಮ್ಮನ್ನು ತಾವು ಹೆಚ್ಚು ಹೊಗಳಿಕೊಳ್ಳದೇ ಕಥೆಯಲ್ಲಿ ಕೇವಲ ಸಾಮಾನ್ಯ ಪಾತ್ರವಾಗಿ ತಮ್ಮನ್ನು ಕರೆದು ಉತ್ಪ್ರೇಕ್ಷೆಗಳಿಂದ ದೂರವಿದ್ದು ಕಥೆಯನ್ನು ಸ್ವಾರಸ್ಯಕರವಾಗಿಸಿದ್ದಾರೆ.

ಆರಂಭದಲ್ಲಿ, ಸಾಮಾನ್ಯವಾಗಿ ಮಹಾನ್ ವ್ಯಕ್ತಿಗಳು ಭಾಷಣ ಮಾಡುವಾಗ ನಾವುಗಳು ಏನು ಮಾಡುತ್ತೇವೆ, ಕೇವಲ ಎಲ್ಲೋ ಓದಿದ ಹಾಗೂ ತಿಳಿದಿದ್ದ ಅಥವಾ ಇನ್ಯಾರದ್ದೋ ಅನುಭವ, ಅಥವಾ ಕೇಳಿದ್ದನ್ನು ಆಧರಿಸಿ ಭಾಷಣಕ್ಕೆ ಅಣಿಯಾಗುವುದು ಸಾಮಾನ್ಯ. ಆದರೆ ಅದೆಷ್ಟು ಸತ್ಯ ಅಥವಾ ಸುಳ್ಳು ಎಂಬ ಗೋಜಿಗೂ ಹೋಗದೆ, ಭಾಷಣಕಾರರಾಗಿ ಚಪ್ಪಾಳೆಗಾಗಿ ಅಥವಾ ನಮ್ಮ ಪಾತ್ರ ನಿಭಾಯಿಸುವ ಸಲುವಾಗಿ ಆತುರದಲ್ಲಿ ಅಡುಗೆ ಮಾಡಿದಂತೆ ಮಹಾನ್ ವ್ಯಕ್ತಿಗಳ ಭಾಷಣ ಮಾಡುತ್ತೇವೆ. ಹಾಗೂ ಸಂಸ್ಕೃತದ ಶ್ಲೋಕವೊಂದನ್ನು ನೆನಪಿಸುವಂತೆ 'ಅಲ್ಪ ಜ್ಞಾನಿ ಮಹಾ ಮೇದಾವಿ', ಕಡಿಮೆ ತಿಳಿದಿದ್ದರೂ ಸಹ ಎಲ್ಲವನ್ನು ಅರಿತಂತೆ ಆಡುವುದು ಬೇಡ ಎನ್ನುವಂತೆ ಲೇಖಕರು ಕಥೆ ಹೆಣೆದಿದ್ದಾರೆ.

ಸತ್ಯನಾರಾಯಣರವರು 'ನಿಮ್ಮ ಮೊದಲ ಪ್ರೇಮದ ಕಥೆ'ಯಲ್ಲಿ ಯೂನಿವರ್ಸ್‌ಲ್ ಸಬ್ಜೆಕ್ಟ್ ಆದ ಪ್ರೀತಿಯನ್ನು ಆರಿಸಿಕೊಂಡಿದ್ದಾರೆ. ಕಥೆಯನ್ನು ನಾಲ್ಕು ಭಾಗದಲ್ಲಿ ಬರೆಯಲಾಗಿದೆ. ಪ್ರೀತಿ, ಸ್ನೇಹ, ಕರುಣೆ, ಎಲ್ಲರಲ್ಲೂ ಎಲ್ಲ ಕಾಲದಲ್ಲೂ ಹಿಂದೆಯೂ ಮುಂದೆಯೂ ಹಾಗೂ ಪ್ರಸಕ್ತ ಜಗತ್ತಿನಲ್ಲಿ ಸದಾ ನಮ್ಮೊಂದಿಗೆ ಇರುವಂತಹ ವಿಷಯಗಳು, ಪ್ರೇಮಕಥೆಗಳು ಎಂದಿಗೂ ಯಾರಿಗೂ ಬೇಸರವೆಸಿಸುವುದಿಲ್ಲ. ಆದರೆ ಅದನ್ನು ವಿಶಿಷ್ಟ ರೀತಿಯಲ್ಲಿ ಹೆಣೆಯುವುದು ಕಥೆಗಾರರ ಜಾಣ್ಮೆಗೆ ಬಿಟ್ಟ ವಿಷಯ. ಊಟದಲ್ಲಿನ ಉಪ್ಪಿನ ಹಾಗೆ ಪ್ರೀತಿ ಜೀವನದಲ್ಲಿ ಅತ್ಯಾವಶ್ಯ. ಅದನ್ನು ಬಿಟ್ಟು ಬದುಕೋದು ಕಷ್ಟಸಾಧ್ಯ.

ಲೇಖಕರು ಅವರೇ ಹೇಳಿಕೊಂಡಂತೆ ತಮ್ಮ ನಲವತ್ತನೇ ವಯಸ್ಸಿನಲ್ಲಿ ಈ ಕಥೆಯನ್ನು ಬರೆದಿದ್ದಾರೆ. ಲೇಖಕರು ಮತ್ತದೇ ಕೇಳಿ ಬರೆಯುವ ಮಾರ್ಗವನ್ನು ಅನುಸರಿಸಿದ್ದಾರೆ. ತಾವು ಹಾಗೂ ತಮ್ಮ ಗೆಳೆಯರು ಪರಸ್ಪರ ಭೇಟಿಯ ಸಮಯದಲ್ಲಿ ತಮ್ಮ ಗೆಳೆಯರೊಬ್ಬರು ಹೇಳಿದ

ಕಥೆಯನ್ನು ಲೇಖಕರು ನಮಗಿಲ್ಲಿ ಪ್ರಸ್ತುತ ಪಡಿಸಿದ್ದಾರೆ. ಯಾರದ್ದೋ ಬಾಯಿಂದ ಕಥೆ ಕೇಳಿಸಿಕೊಂಡು ಬರೆಯುವುದು ಸುಲಭದ ಮಾತಲ್ಲ. ಆದರೇ ಲೇಖಕರು ಅದರಲ್ಲಿ ತಾವು ನಿಪುಣರು ಎಂದು ತೋರಿಸಿಕೊಟ್ಟಿದ್ದಾರೆ.

ಸತ್ಯನಾರಾಯಣರವರ ಕಥೆಗಳಲ್ಲಿ ಅಸಾಮಾನ್ಯವಾದುದಕ್ಕೆ ಸದಾ ಪ್ರವೇಶವಿದೆ. 'ಹೀಗೂ ಉಂಟೇ ಪ್ರೇಮದ ಶೈಲಿ' ಯ ಹಿರಿಯ ಪ್ರೇಮಿಗಳಿರಬಹುದು. 'ನಿಮ್ಮ ಮೊದಲ ಪ್ರೇಮದ ಕಥೆ'ಯ ಪುಟ್ಟರಾಜುವಿರಬಹುದು. ಇವರೆಲ್ಲರೂ ಸಾಮಾಜಿಕ ಒತ್ತಡಗಳನ್ನು ಮೀರಿ ಒಳಿತಿನ ಕಡೆಗೆ, ಆದರ್ಶದ ಕಡೆಗೆ ತುಡಿಯುತ್ತಿರುತ್ತಾರೆ.. ಸತ್ಯನಾರಾಯಣ ರವರ ಸಹಾನುಭೂತಿಯು ಸದಾ ಇಂಥವರ ಕಡೆಗೆ ಇರುತ್ತದೆ. ಈ "ಸಾಮಾನ್ಯ ಧೀರರು" ಸಮುದಾಯದ ಚಲನೆಯ ದಿಕ್ಕನ್ನು ಬದಲಾಯಿಸದಿದ್ದರೂ ಮನುಷ್ಯ ಚೇತನದ ಸಾಧ್ಯತೆಗಳನ್ನು ಅನಾವರಣ ಮಾಡುತ್ತರೆ. ಇಲ್ಲಿ ಪ್ರೇಮವು ಕೇವಲ ಭಾವನೆಗಳ ಪ್ರವಾಹವಾಗದೇ ಗೃಹಸ್ಥರಿಗೆ ವೇದ್ಯವಾದ ಲೈಂಗಿಕತೆಯ ಪುಲಕ–ನಿಟ್ಟುಸಿರುಗಳನ್ನು ಅಡಗಿಸಿಕೊಂಡಿರುತ್ತದೆ. ಸಾವು ಬದುಕಿನ ಸಾರ್ಥಕತೆಯನ್ನು ಕೈಮಾಡಿ ತೋರಿಸುವ ಸಾಧನವಾಗುತ್ತದೆ. ಹಳೆಯದೆಲ್ಲವನ್ನು ಒಪ್ಪದ ಕತೆಗಾರನಿಗೆ ಕೂಡ ಬದಲಾವಣೆಯು ಭಯಾನಕ ಸಂಗತಿಯಾಗುತ್ತದೆ. ಈ ಸನ್ನಿವೇಶವನ್ನು ಸೆರೆಹಿಡಿಯಲು ಅವರು ಬಳಸುವ ರೂಪಕವೆಂದರೇ ಕಥೆ ಹೇಳಲಾಗದ, ಹೇಳಿದರೂ ಯಾರೂ ಕೇಳದ ಅಥವಾ ಕೇಳುವವರ ಇಷ್ಟಕ್ಕೆ ಅನುಗುಣವಾಗಿ ಕಥೆಯ ಸ್ವರೂಪವನ್ನೇ ಬದಲಾಯಿಸ ಬೇಕಾಗಿರುವ ಸ್ಥಿತಿ. "ವಿಕ್ಟೋರಿಯ ಮಗ ದೇವಲಿಂಗು" ಕಥೆಯಲ್ಲಿ ಕೇವಲ ಮಾರ್ಗರೇಟ್ ಮೀಡ್ ಅವರಿಂದ ಪ್ರತಿನಿಧಿತವಾಗುವ, ನವವಸಾಹತುಶಾಹಿಯನ್ನು ಕುರಿತ ಪ್ರತಿಭಟನೆಯಲ್ಲ. ನಮ್ಮೊಳಗಡೆಯೇ ಮನೆಮಾಡಿರುವ ಪಾಶ್ಚಾತ್ಯ ಆಕ್ರಮಣಶೀಲತೆಯ ಬಗೆಗಿನ ಭಯ ಇಲ್ಲಿ ಮೂಡಿ ಬಂದಿದೆ. " ಹೀಗಿಲ್ಲಿ ಅಮೇರಿಕಾ" ಕತೆಯ ಸಾವಿತ್ರಿಯ ದುರಂತದ ಮೂಲಕವೂ ಇದನ್ನೇ ಹೇಳುತ್ತಿದೆ. ಕೆಂಟಕಿ ಕೋಳಿಗಳ ಮಾರಾಟದ ಬಗೆಗೆ ಪ್ರತಿಭಟನೆ ಮಾಡಬಹುದು. ಆದರೆ ನಾವು ಆಲೋಚಿಸುವ, ಭಾವಿಸುವ ರೀತಿಯಲ್ಲೇ ಆಗಿರುವ ಬದಲನ್ನು ಹೇಗೆ ಪ್ರತಿಭಟಿಸಬಹುದು? ಇಂಥ ಕಥೆಗಳನ್ನು ಬರೆಯುವುದು ಕೂಡ ಕಲಾವಿದನಿಗೆ ತೆರೆದಿರುವ ದಾರಿಯೇ. ಹೀಗೆ ಲೋಕದ ದಿಕ್ಕಿನಿಂದ ಹೊರಟು ಕತೆಯನ್ನು, ಕತೆಯ ದಿಕ್ಕಿನಿಂದ ಹೊರಟು ಲೋಕವನ್ನು ತಲುಪುವ ಕೆಲಸ ಇಲ್ಲಿ ಪದೇ ಪದೇ ಆಗುತ್ತದೆ. ಓದುಗನನ್ನು ತನ್ನ

ಆತ್ಮೀಯತೆಯ ತೆಕ್ಕೆಯೊಳಗೆ ತೆಗೆದುಕೊಳ್ಳುವಂತೆ ಬರೆಯುವ ತಂತ್ರ ಕೂಡ ಇದೇ ಉದ್ದೇಶವನ್ನು ಹೊಂದಿದೆ. ಇಲ್ಲಿನದು ಕಾವ್ಯ ಮೀಮಾಂಸೆಯಲ್ಲಿ ಬರುವ ಮಿತ್ರ ಸಂಹಿತದ ಬಗೆ.

ಸಾಮಾನ್ಯವಾಗಿ ಸತ್ಯನಾರಾಯಣ ಅವರು ದೀರ್ಘ ಕತೆಗಳನ್ನು ಬರೆಯುವುದಕ್ಕೆ ಪ್ರಸಿದ್ಧರು. ಆದರೆ 'ಚಿತ್ರಗುಪ್ತನ ಕತೆಗಳು' ಎಂಬ ಕತೆಯಲ್ಲಿ ಪ್ರಯೋಗವೆಂಬಂತೆ ಅವರು ಕೇವಲ ಅರ್ಧಪುಟ, ಒಂದು ಪುಟ, ಎರಡು ಪುಟಗಳ ಕತೆಗಳನ್ನು ಬರೆದಿದ್ದಾರೆ. ಕೆಲವು ಕತೆಗಳಂತೂ ವಾಕ್ಯಗಳನ್ನು ಕತ್ತರಿಸಿ ಒಂದರ ಕೆಳಗೆ ಒಂದನ್ನು ಒಟ್ಟಿದರೆ ಒಂದು ಕವಿತೆಯೆನ್ನಿಸಿಬಿಡುವುದು. ಒಂದು ಕತೆಯ ಶಕ್ತಿ ಇರುವುದು ಅದು ಉಂಟುಮಾಡುವ ಪರಿಣಾಮದ ತೀವ್ರತೆಯಲ್ಲಿ. ತಾನು ಅಂದುಕೊಂಡಿದ್ದನ್ನು ಓದುಗನಿಗೆ ವರ್ಗಾಯಿಸುವುದರಲ್ಲಿಯ ಯಶಸ್ಸಿನಲ್ಲಿ ಈ ವರ್ಗಾವಣೆಯ ಪ್ರಕ್ರಿಯೆಯಲ್ಲಿ ಅದು ಪಡೆದುಕೊಳ್ಳುವಂತಹ ಅನಂತ ಹೊಳಹುಗಳಲ್ಲಿ ಸೃಜನಶೀಲ ವ್ಯಕ್ತಿಯೊಬ್ಬ ನಿರಂತರವಾಗಿ ಇಂಥ ಹೊಳಹುಗಳ ಹುಡುಕಾಟದಲ್ಲಿ ತೊಡಗಿರುತ್ತಾನೆ. ಅದರಲ್ಲಿ ಆತ ಎಷ್ಟರಮಟ್ಟಿಗೆ ಯಶಸ್ವಿಯಾಗುತ್ತಾನೆ ಎನ್ನುವುದರ ಮೇಲೆಯೇ ಆತನ ಸೃಷ್ಟಿಯ ಹಣೆಬರಹ ನಿರ್ಧಾರವಾಗುತ್ತದೆ. ಸಾಹಿತ್ಯದ ಸೃಜನ ಕ್ರಿಯೆಯಲ್ಲಿ ಅದರ ವರ್ಣತಂತುಗಳು ಕೃತಿಕಾರನ ಭಾವವಲಯದಲ್ಲಿಯೇ ನಿರ್ಧಾರಗೊಳ್ಳುವಂತಹುದು. ಕಣ್ಣಿಗೆ ಕಾಣದಂತಹ ಬೀಜವೊಂದು ಆಲದ ಮರವೂ ಆಗಬಹುದು, ತುಳಸಿಯ ಗಿಡವೂ ಆಗಬಹುದು. ಅವುಗಳ ಉಪಯುಕ್ತತೆಯೇ ಅವುಗಳ ಸಾರ್ಥಕತೆ. ರಸ್ತೆಬದಿಯಲ್ಲಿ ಹುಟ್ಟಿಕೊಂಡಿರುವ ಪುಟ್ಟ ಸಸ್ಯವೊಂದು ಜೀವ ಉಳಿಸುವ ಜೀವ ವೃಕ್ಷದ ಸಾಮರ್ಥ್ಯವನ್ನು ಪಡೆದಿರಬಹುದು. ಆದರೆ ಅದನ್ನು ಕಂಡು ಹೇಳಬೇಕಲ್ಲವೇ? ಈ ಕಾರಣಕ್ಕಾಗಿ ಸತ್ಯನಾರಾಯಣ ಅವರ ಕತೆಯ ಗಾತ್ರವನ್ನೇ ವಿಶೇಷ ಎಂದು ಪರಿಗಣಿಸಬೇಕಾದ ಅಗತ್ಯವೇನಿಲ್ಲ.

'ಸತ್ಯನಾರಾಯಣರವರು ಗದ್ಯಶೈಲಿಯ ಆರಾಧಕರು. ಅವರು ಜಗತ್ತಿನ ವಿರಾಮವೆಲ್ಲ ತಮ್ಮ ಬಳಿ, ಕೇಳುವವರ ಬಳಿ ಇರುವಂತೆ ಬಿಡುಬೀಸಾಗಿ ಬರೆಯುತ್ತಾರೆ. ಆದರೆ ಈ ಅನಾಕರ್ಷಕ ಶೈಲಿಗೆ ಒಂದು ಬಗೆಯ ಪಾರದರ್ಶಕತೆಯಿದೆ. ಅದು ತನ್ನ ಚೆಲುವಿನ ಕಡೆಗೆ ಗಮನ ಸೆಳೆಯುವುದಿಲ್ಲ. ಬದಲಾಗಿ ತಾನು ಕಟ್ಟಿಕೊಡುತ್ತಿರುವ ಬದುಕಿನ ಭಾವಲಹರಿಗಳ

ಚೆಲುವಿನ ಕಡೆಗೆ ಗಮನ ಸೆಳೆಯುತ್ತದೆ. ಹೀಗೆ ಬದುಕನ್ನು ವಿವಿಧ ನೆಲೆಯಲ್ಲಿ ಮುಖಾಮುಖಿಯಾಗುವ ಕೆ. ಸತ್ಯನಾರಾಣ ಅವರು ಮಾಡಿಸುವ ಜೀವನದರ್ಶನ ಮಾಸ್ತಿಯವರ ಆದರ್ಶಗಳನ್ನು ಹೋಲುತ್ತವೆ. ನಮ್ಮ ಪರಂಪರೆಯೊಂದಿಗೆ ನಮ್ಮ ಬಂಧವನ್ನು ಇನ್ನಷ್ಟು ಗಟ್ಟಿಗೊಳಿಸುತ್ತವೆ. ಈ ಕಾರಣಕ್ಕೆ ಇಲ್ಲಿಯ ಕಥಾವಸ್ತುವಿನ ಆಯ್ಕೆ, ಹಾಗೂ ನಿರೂಪಣೆ ನಮಗೆ ಇಷ್ಟವಾಗುತ್ತವೆ.

ವಸ್ತುವಿನ ದೃಷ್ಟಿಯಿಂದ 'ರಾಜಧಾನಿಯಲ್ಲಿ ಶ್ರೀಮತಿಯರು' 'ಗೌರಿ' 'ಸನ್ನಿದಾನ' 'ಕಾಲಜಿಂಕೆ' ಮತ್ತು ರಾಮಸೀತೆಯರ ಸಂಬಂಧದ ಸೂಕ್ಷ್ಮಗಳ ಕುರಿತಾಗಿಯೇ ಇರುವ ಅವರ ಆರಂಭಿಕ ಕತೆಗಳಲ್ಲೊಂದು, 'ಸೀತೆ ಹೇಳಿದ ರಾಮನ ಗುರುತು' ನೆನಪಾಗುವಂತೆ ಈ ಬರಹ ಕೂಡ ಸ್ತ್ರೀಮತವನ್ನುತ್ತರಿಸುವ ನಿಟ್ಟಿನಲ್ಲೇ ಇದೆ. ಹೆಣ್ಣು, ಅವಳ ಕನಸು, ಆಸೆ–ಆಕಾಂಕ್ಷೆಗಳು, ಸಿಟ್ಟು–ಸೆಡುವುಗಳು, ವಾಂಛೆ ಮತ್ತು ಅದಕ್ಕೆ ಸಂವಾದಿಯಾಗಿ ಗಂಡಸಿನ ಧಾರ್ಷ್ಯ, ನಿರ್ಲಕ್ಷ್ಯ ಮತ್ತು ತಿರಸ್ಕಾರ ಸಹಿತ ದಮನಿಸುವ ಪ್ರವೃತ್ತಿಗೆ ಮುಖಾಮುಖಿಯಾಗಿ ಅವಳು ತೆಗೆದುಕೊಳ್ಳುವ ಭಿನ್ನ ವಿಭಿನ್ನ ನಿಲುವುಗಳು, ಹೆಜ್ಜೆಗಳು ಸತ್ಯನಾರಾಯಣರನ್ನು ಮತ್ತೆ ಮತ್ತೆ ಕಾಡುತ್ತ ಬಂದಿರುವ ಒಂದು ಪ್ರಮುಖ ವಿದ್ಯಮಾನ. ಹಾಗೆಯೇ, ಮನುಷ್ಯ ಸಂಬಂಧದ ಶಿಖರಪ್ರಾಯ ಪ್ರಯೋಗದಂತಿರುವ ದಾಂಪತ್ಯ ಕೂಡ ಅವರನ್ನು ಕಾಡುತ್ತಲೇ ಉಳಿದ ವಸ್ತು. ಗಾಂಧೀವಾದ, ಮಾರ್ಕ್ಸ್‌ವಾದ, ಮಾಸ್ತಿ–ವಿಶ್ವೇಶ್ವರಯ್ಯ ಪರಂಪರೆ, ಸಾಹಿತ್ಯ ವಿಮರ್ಶೆ, ಪ್ರವಾಸ ಮತ್ತು ಸಮಕಾಲೀನ ವಿದ್ಯಮಾನಗಳಿಗೆ ತಮ್ಮನ್ನು ತೆತ್ತುಕೊಳ್ಳುತ್ತಲೇ ಅವರ ಮನಸ್ಸು ಈ ಎರಡರ ಬಗ್ಗೆಯೂ ಮಿಡಿಯುತ್ತ ಉಳಿದಿದೆ, ಮಾನವ ಸಮಷ್ಟಿಯ ಸಮೃದ್ಧಿ ಮತ್ತು ಆರೋಗ್ಯಕರ ಸುಖದ, ಹಿತಚಿಂತನೆಯ ನೆಲೆಯಲ್ಲಿ.

ಹಾಗೆಯೇ ವಸ್ತುವಿನ ಸಂದರ್ಭದಲ್ಲಿಯೇ ಹೇಳಬೇಕಾದ ಇನ್ನೊಂದು ಮಾತು. ಒಂದು ಕತೆ ಒಂದೇ ಕತೆಯಲ್ಲ, ಅದು ಸೀರೀಸ್ ಆಫ್ ಸ್ಟೋರೀಸ್; ಯಾವುದೇ ಒಂದು ಕತೆ ಒಳಗೊಳ್ಳುವ ಪಾತ್ರವರ್ಗವೇನಿದೆ, ಅದು ಅವರು ಮಾತ್ರವೇ ಆಗಿರುವುದಿಲ್ಲ, ನಿಮ್ಮ ನಮ್ಮನ್ನೂ ಸೇರಿಕೊಂಡೇ ಅದು ಸಾಗುತ್ತಿದೆ. ಬೆಳೆಯುತ್ತಿದೆ ಎನ್ನುವಂಥ ಅವರ ಒಂದು ದೃಷ್ಟಿಕೋನ ಇಲ್ಲಿಯೂ ಕೆಲಸ ಮಾಡಿದೆ. ಸತ್ಯನಾರಾಯಣರವರು 'ನಿಮ್ಮ ಮೊದಲ ಪ್ರೇಮದ ಕಥೆ'ಯನ್ನು ಹೇಳಿದ್ದು ಈ ನಿಟ್ಟಿನಿಂದಲೇ. ಇದೆಲ್ಲ ಒಂದೇ ಕತೆಯೇ ಎಂಬ ಅವರ ಅನುಮಾನ ಕೂಡ

ಇದೇ ನಿಟ್ಟಿನದು. ಕತೆ ಓದಿ ಮುಗಿಸಿದ ಮೇಲೂ ಒಬ್ಬೊಬ್ಬ ಓದುಗನಲ್ಲೂ ಅದು ಬೇರೆ ಬೇರೆಯೇ ಕತೆಯಾಗಿ ಮರುಹುಟ್ಟು ಪಡೆಯುವಂಥದು, ಬೆಳೆಯುವಂಥದು ಎನ್ನುವುದು ಅವರ ನಿಲುವು.

ಹೀಗೆ ವಸ್ತು ಮತ್ತು ವಿನ್ಯಾಸದಲ್ಲಿ ಈ ಬರಹಗಳು ಮತ್ತು ಕೆಲವೊಂದು ಕತೆಗಳ ಜೊತೆ ಸಾತತ್ಯವನ್ನು ಹೊಂದಿವೆ.

ಪ್ರತಿಯೊಬ್ಬ ಓದುಗನಿಗೂ ಒಂದಲ್ಲಾ ಒಂದು ಪುಸ್ತಕ ಓದುವಾಗ ಆಗಿರುವ ಅನುಭವವಿದು. ಕೃತಿಕಾರ ತನ್ನ ಬಗ್ಗೆಯೇ ಬರೆದಿದ್ದಾನೆ, ಇದು ತನ್ನದೇ ಕತೆ, ಈ ಸಂವೇದನೆಗಳೆಲ್ಲವೂ ನನ್ನವೇ ಎನಿಸದೇ ಇರುವ ಓದುಗ ಇರಲಿಕ್ಕಿಲ್ಲ. ಸಾಹಿತ್ಯ ನಮ್ಮದಾಗುವ ರೀತಿಯೇ ಅದು. ಹೀಗಾಗಿಯೇ ಸತ್ಯನಾರಾಯಣರು 'ನಮ್ಮ ಮೊದಲ ಪ್ರೇಮದ ಕತೆ'ಯನ್ನು ನಮಗೇ ಹೇಳಬಲ್ಲ ಕತೆಗಾರ ಆಗುವುದು ಸಾಧ್ಯವಾಗುವುದು ಕೂಡ. ಇದಕ್ಕೆ ಅನನ್ಯ ಪ್ರೀತಿ ಇರಬೇಕಾಗುತ್ತದೆ. ಓದುಗನ ಜೊತೆ ಅಂತರಂಗದ ಸ್ನೇಹಿತನೊಂದಿಗೆ ಮಾತ್ರ ಇರಬಹುದಾದ ಒಂದು ಬಗೆಯ ತಾದ್ಯತ್ಮ ಸಾಧ್ಯವಾಗಬೇಕಾಗುತ್ತದೆ. ಆದರೆ ಇದು ಎಲ್ಲ ಸಂದರ್ಭದಲ್ಲಿಯೂ ಸಾಧ್ಯವಾಗುತ್ತದೆ ಎನ್ನುವಂತಿಲ್ಲ. ನಾವು ಬದುಕುತ್ತಿರುವ ಕಾಲ ಅದಕ್ಕೆ ಅಷ್ಟು ಪೂರಕವಾಗಿರುವಂತೆಯೂ ಕಾಣಿಸುವುದಿಲ್ಲ. ಆಗ ಸೂಕ್ಷ್ಮ ಸಂವೇದಿ ಲೇಖಕನಾದವನು ಹಲವು ಬಗೆಯ ಇರಿಸು-ಮುರಿಸುಗಳನ್ನೆದುರಿಸಬೇಕಾಗುತ್ತದೆ.

"ಓದುಗರೊಡನೆ......." ಎಂದು ತೊಡಗುವ ಸತ್ಯನಾರಾಯಣರ ಮಾತುಗಳು ತೊಡಗುವುದೇ ಹೀಗೆ;

"ಕೆಲವು ತಿಂಗಳುಗಳ ಹಿಂದೆ ಒಂದು ದಿನ ಹೀಗಾಯಿತು. ನಂತರ ಮತ್ತೆ ಮತ್ತೆ ಹೀಗಾಗಲು ಶುರುವಾಯಿತು.

ಬಹುಷಃ ಒಬ್ಬ ಕತೆಗಾರನಿಗೆ ಕೆಲವೊಂದು ಕತೆಗಳನ್ನು ಅವು ಎಷ್ಟೇ ಆಪ್ತವಾಗಿದ್ದರೂ, ಎಷ್ಟೇ ಸಮೃದ್ಧವಾಗಿದ್ದರೂ, ಎಷ್ಟೇ ಚೆನ್ನಾಗಿ ಹೇಳಬಲ್ಲವನಾಗಿದ್ದರೂ, ಹಾಗೆಲ್ಲ ಆಗಿರುವುದರಿಂದಲೇ ಅವನ್ನು ಹೇಳುವುದು ಸಾಧ್ಯವಿಲ್ಲ ಕೂಡ ಎಂಬಂಥ ಪರಿಸ್ಥಿತಿ ಎದುರಾಗುವುದು ಕೂಡ ಸಹಜವೇ. ಆಗ ಅವುಗಳನ್ನು ಹೇಳುವ ಹೊಸ ವಿಧಾನವನ್ನು ಅವನು ಆವಿಷ್ಕರಿಸಿಕೊಳ್ಳಲೇ ಬೇಕಾಗುತ್ತದೆ. ಕತೆಗಾರನಿಗೆ ಗೊತ್ತಿರುವ ಕತೆಗಳನ್ನು ಹೇಗಾದರೂ

ಸರಿ, ಹೇಳದೇ ವಿಧಿಯಿಲ್ಲ. ಅಂಥ ಹೊಸ ಹೊಸ ವಿಧಾನಗಳಲ್ಲಿ ಕಾವ್ಯಕ್ಕೆ ಹತ್ತಿರವಾದ ಬಗೆಯಲ್ಲಿ, ಅನೂಹ್ಯತೆಯನ್ನುಳಿಸಿಕೊಂಡು, ಅಬ್ಸ್ಟ್ರಾಕ್ಟ್ ವಿಧಾನದಲ್ಲಿ ಹೇಳುವುದೂ ಒಂದು. ವಾಸ್ತವಕ್ಕೆ ಮೀರಿದ ವಿವರಗಳನ್ನು, ಅತೀಂದ್ರಿಯ ಅನುಭವಗಳನ್ನು, ಫ್ಯಾಂಟಸಿಯನ್ನು, ನಿಜವೋ ಭ್ರಮೆಯೋ ಸ್ಪಷ್ಟವಿಲ್ಲದ ಘಟನಾವಳಿಗಳನ್ನು ತರುವುದು ಒಂದು. ಭಾಷೆಯನ್ನು ಹಲವು ಸ್ತರಗಳಲ್ಲಿ ವಿಭಿನ್ನ ಅರ್ಥ ಸ್ಫುರಿಸುವಂತೆ ಜೋಡಿಸುತ್ತ ನಿರೂಪಣೆಯನ್ನು ಹೆಣೆಯುವುದು ಒಂದು. ಇಲ್ಲಿ ಅರ್ಥಕ್ಕಿಂತ, ಕತೆಗಿಂತ, ಕಾರ್ಯಕಾರಣ ತರ್ಕಕ್ಕಿಂತ ಭಾವವೇ ಹೆಚ್ಚು ಮುಖ್ಯವಾಗುತ್ತದೆ. ಭಾವ ಓದುಗನಲ್ಲಿ ಹುಟ್ಟಿಸುವ ಸಂವೇದನೆಗಳು ಮುಖ್ಯವಾಗುತ್ತವೆ. ಒಟ್ಟು ಸಂವಹನ ಈ ಲಯದಲ್ಲಿ ಸಫಲಗೊಳ್ಳುವುದೇ ಮುಖ್ಯವಾಗುತ್ತದೆ. ಸತ್ಯನಾರಾಯಣರ ಇಲ್ಲಿನ ಹೆಚ್ಚಿನ ಕತೆಗಳಲ್ಲಿರುವ ಹೊಸತನ ಇದೆ.

ಇಷ್ಟೇ ಮುಖ್ಯವಾಗಿ ಇಲ್ಲಿ ಗಮನಿಸಬೇಕಾದ ಇನ್ನೂ ಕೆಲವು ಅಂಶಗಳಿವೆ. ಅದು ಸತ್ಯನಾರಾಯಣ ಅವರ ಕತೆಗಾರಿಕೆಯ ಕುರಿತು. ಇವರ ಕತೆಗಳು ಬಿಡಿ ಬಿಡಿಯಾಗಿ ಮತ್ತು ಒಟ್ಟಾರೆಯಾಗಿ ನೀಡುವ ಅನುಭೂತಿಯಲ್ಲಿ ಮಹತ್ತರ ವ್ಯತ್ಯಾಸವಿದೆ. ಸತ್ಯನಾರಾಯಣ ಅವರ ಕತೆಗಳನ್ನು ಅಲ್ಲಿ ಇಲ್ಲಿ ಓದಿದಾಗ ಅವು ಓದುಗನ ಮನಸ್ಸಿನಲ್ಲಿ ತಮಗೆ ಬೇಕಾದ ಸ್ಪೇಸ್ ಪಡೆದುಕೊಳ್ಳುವುದಿಲ್ಲ. ಪತ್ರಿಕೆಯಲ್ಲಂತೂ ಅದನ್ನು ನಿರೀಕ್ಷಿಸುವುದೇ ಬಹಳ ಕಷ್ಟ. ಸಂಕಲನದಲ್ಲಿ ಓದಿದಾಗ ಇವುಗಳನ್ನು ತಿಳಿದುಕೊಳ್ಳಲು ನಮಗೆ ಮೈ ಮನಸ್ಸು ಎಲ್ಲಾ ಹೊಸದಾಗಿರೋ, ಶುದ್ಧವಾಗಿರೋ ಹೊಸದೇ ಆದ ಮನಸ್ಸು ಬೇಕೇನೋ ಅನಿಸತೊಡಗುತ್ತದೆ. ಆದರೆ ಹೀಗೆ ಅನಿಸುವುದು ಇವರ ಕತೆಗಳನ್ನು ಒಟ್ಟಾಗಿ ಗ್ರಹಿಸಿದಾಗ ಮಾತ್ರ ಅನ್ನುವುದು ಮುಖ್ಯ.

ಅದೇ ರೀತಿ ಅನೇಕ ಬಾರಿ ಇವರ ಯಾವುದೋ ಹಳೆಯ ಕಥೆಯ ಒಂದು ಪಾತ್ರ ಇನ್ನೊಂದು ಕತೆಯಲ್ಲಿ ಅತ್ಯಂತ ಸಹಜವಾಗಿ ಕಾಣಿಸಿಕೊಂಡು ಕಥಾನಕದ ಅರ್ಥ ವಿಸ್ತಾರಗಳನ್ನು ಹೆಚ್ಚಿಸುವುದು ಕೂಡ ಗಮನಿಸಬೇಕಾದ ಅಂಶ. ಒಂದು ಸಂಕಲನದಲ್ಲಿ ಬರುವ 'ಸೋದರತ್ತೆ ಸಾವಿತ್ರಿಯ ಗಂಡನ ಮುಚ್ಚಟೆ'ಯನ್ನು ಕಾಣುವಾಗ 'ನಿಮ್ಮ ಮೊದಲ ಪ್ರೇಮದ ಕತೆಯ ಪುಟ್ಟನಂಜ'ನ ನೆನಪು ಬಂದರೆ ಅಚ್ಚರಿಯಿಲ್ಲ. ಅಂದರೆ ನೆನಪು ಆ ಕತೆಗೆ ಕೊಡುವ ಒಂದು ಪ್ರಭೆ ಬೇರೆಯೇ ಒಂದು ಬಗೆಯದ್ದು. ಸತ್ಯನಾರಾಯಣ ಅವರ ಕತೆಗಳ ಸೃಷ್ಟಿಯ ಇನ್ನೆಷ್ಟೋ ಪಾತ್ರಗಳು ಮತ್ತೊಮ್ಮೆ ಅಲ್ಲಿ ಇಲ್ಲಿ ಕಾಣಿಸಿಕೊಳ್ಳುತ್ತವೆ ಅಥವಾ ಕಾಣಿಸಿಕೊಂಡ

ಭ್ರಾಂತಿ ಹಿಡಿಸುವಷ್ಟರ ಮಟ್ಟಿಗೆ ಇವರ ಪಾತ್ರಗಳು ಸಹಜವಾಗಿ, ಆಪ್ತವಾಗಿ ನಮ್ಮ ಮನಸ್ಸಿನಲ್ಲಿ ಉಳಿದಿರುತ್ತವೆ. ಇದೊಂದು ವಿಶಿಷ್ಟ ಬಗೆಯ ತಂತ್ರವಾಗಿ ಓದುಗನನ್ನು ಹೊಸ ದರ್ಶನದತ್ತ ಕೊಂಡೊಯ್ಯುತ್ತದೆ. ಈ ಬಗೆಯಲ್ಲಿ ಕಥಾನಕದೊಳಗೆ ಕಥಾನಕ ನುಸುಳುವ ಬಗ್ಗೆ ಇಲ್ಲಿ ಒಂದು ಮಾತು ಬರುತ್ತದೆ. "…..ಅದು ಬಂದ ರೀತಿಯಲ್ಲಿ, ಬೆಳೆದ ರೀತಿಯಲ್ಲಿ, ಇವೆಲ್ಲಕ್ಕೂ ಒಂದಕ್ಕೊಂದು ಸಂಬಂಧ ಇದೆಯೆ, ಎಂಬ ಪ್ರಶ್ನೆಯೇ ಅಪ್ರಸ್ತುತವಾದದ್ದು. ಹಾಗೆ ಸಂಬಂಧವಿಲ್ಲದಿದ್ದರೆ, ಅವೆಲ್ಲ ಒಂದರ ಹಿಂದೆ ಒಂದು, ನಾನು, ತಾನು ಅಂತ ಆತುರಾತುರವಾಗಿ ಓಡಿ ಬರುತ್ತಿರಲಿಲ್ಲ. ಬಂದು ಸೇರುತ್ತಿರಲಿಲ್ಲ."

ಎಡಪಂಥೀಯ ವಿಚಾರ, ಮಾದರಿ, ಗ್ರಹಿಕೆ ಇತ್ಯಾದಿಗಳನ್ನು ಅನುಮಾನಿಸುತ್ತಾ, ಪ್ರಶ್ನಿಸುತ್ತಾ, ಬಲಪಂಥೀಯತೆಯನ್ನು ಒಪ್ಪಲಾಗದ ಚಡಪಡಿಕೆ ಹಲವರದು. ಸಾರ್ವಜನಿಕವಾಗಿ ಬಲಪಂಥೀಯರ ದನಿ ಆಕ್ರಮಣಕಾರಿ ರೂಪದಲ್ಲಿ ಕೇಳಿಸುತ್ತಿದ್ದರೂ, ತಣ್ಣಗೆ ಸಂಸ್ಕೃತಿಯ ಬಹುರೂಪತೆಯನ್ನು ಜತನ ಮಾಡಿಕೊಳ್ಳುವ ಪ್ರಯತ್ನದಲ್ಲಿ ಅನೇಕರು ತೊಡಗಿಕೊಂಡಿದ್ದಾರೆ. ಸತ್ಯನಾರಾಯಣರದೂ ಇದೇ ಪ್ರಯತ್ನ. ಸಂಸ್ಕೃತಿ ಎಂದೋ ಒಮ್ಮೆ ರೂಪುಗೊಂಡು ಮುಂದಿನ ತಲೆಮಾರುಗಳು ಯಾವುದೇ ಪ್ರಶ್ನೆ, ಅನುಮಾನಗಳನ್ನು ವ್ಯಕ್ತಪಡಿಸದೆ ಅನುಸರಿಸಿಕೊಂಡು ಹೋಗುವಂಥಾದ್ದಲ್ಲ; ಅದು ನಿರಂತರವಾಗಿ ಆಗುತ್ತಿರುವಂಥಾದ್ದು.

ಈ ಎಲ್ಲ ತಂತ್ರಗಳ ಹಿಂದೆ ಶುದ್ಧ ಕಥಾನಕದ ಅನಿವಾರ್ಯ ಅಂಶಗಳನ್ನು ಅಥವಾ, ಸೃಜನಶೀಲ ಸೃಷ್ಟಿಕ್ರಿಯೆಯ ಸ್ವಾಭಾವಿಕ ಚಲನೆಯನ್ನು ಮೀರಿದ ಒಂದು ಉದ್ದೇಶ, ಗುರಿ ಕೆಲಸ ಮಾಡುತ್ತಿರುತ್ತದೆ ಎಂಬುದೇ ಗುರುತಿಸಬೇಕಾದ ಸಂಗತಿ. ಅದು ಕಥಾನಕವೊಂದು ಕತೆಗಾರನ ಕೈಯಲ್ಲಿ ರೂಪುಗೊಳ್ಳುವ ಪ್ರಕ್ರಿಯೆಯನ್ನು ಆ ಕೆಲಸದಲ್ಲಿ ತೊಡಗಿರುವಾಗಲೇ ಅದನ್ನು ಗಮನಿಸಿಕೊಂಡಿರುವ ಸೂಕ್ಷ್ಮ ಅವಲೋಕನದ ಸಾಕ್ಷೀಪ್ರಜ್ಞೆ ಇಲ್ಲಿದೆ ಎಂಬುದು. ಹಾಗಾಗಿಯೇ ಇದು ಕತೆಯ ಕುರಿತಾಗಿರುವ ಕತೆ.

## ಅಧ್ಯಾಯ-೪

## ಕಥೆಗಳಲ್ಲಿ ವ್ಯಕ್ತಿಚಿತ್ರ ಮತ್ತು ವ್ಯಕ್ತಿತ್ವ ನಿರೂಪಣೆ

ಸತ್ಯನಾರಾಯಣ ಅವರ ಕಥೆಗಳಲ್ಲಿ ಲೋಕಪ್ರಸಿದ್ಧರು ಪಾತ್ರಗಳಾಗಿ ಕಾಣಿಸಿಕೊಳ್ಳುವ ಬಗೆಯನ್ನು ಕುರಿತು ಕೆಲವು ಮಾತುಗಳನ್ನು ಹೇಳಬಹುದು. ಸರ್.ಎಂ.ವಿಶ್ವೇಶ್ವರಯ್ಯ, ಜಿಡ್ಡು ಕೃಷ್ಣಮೂರ್ತಿ, ಮಾರ್ಕ್ ಟುಲಿ, ಮಾರ್ಗರೇಟ್ ಮೀಡ್ ಹೀಗೆಯೇ ಹತ್ತು ಹಲವರು ಇಲ್ಲಿ ಪ್ರತ್ಯಕ್ಷರಾಗುತ್ತಾರೆ. ಪೋಲಂಕಿ ರಾಮಮೂರ್ತಿಯವರ ಹಾಗೆ ಬೇರೆ ಕೆಲವರು ತಮ್ಮ ಐಡೆಂಟಿಟಿಯನ್ನು ಮರೆ ಮಾಚಿಕೊಂಡು "ಕೇವಲ" ಪಾತ್ರಗಳಾಗಿ ಬರುತ್ತಾರೆ. ಐತಿಹಾಸಿಕ ಮತ್ತು ಪೌರಾಣಿಕ ವ್ಯಕ್ತಿಗಳ ಬದುಕಿನ ಘಟನೆಗಳನ್ನು ಅಥವಾ ಅಂಥ ವ್ಯಕ್ತಿಗಳನ್ನು ಕೇಂದ್ರವಾಗಿಟ್ಟುಕೊಂಡು ಕಥೆ ಬರೆದ ಮಾಸ್ತಿಯವರ ರೀತಿಗೂ ಇಲ್ಲಿನ ವಿಧಾನಕ್ಕೂ ಅಂತರವಿದೆ. ಇಲ್ಲಿನದು "ಲೋಕವಾರ್ತೆ" ವಿಸ್ತರಣವಾಗಿ ಕಲ್ಪಕತೆಯನ್ನು ಬಳಸಿ ಅವೆರಡರ ಪ್ರಯೋಜನಗಳನ್ನು ಪಡೆದುಕೊಳ್ಳುವ ಪ್ರಯತ್ನ. ಉದಾಹರಣೆಗೆ ಗಾಂಧೀಜಿ ಮತ್ತು ಕಸ್ತೂರಿ ಬಾ ಅವರ ಕ್ಯಾರಿಚೇರ್‌ಗಳನ್ನು ಸೃಷ್ಟಿಸುವ ಮೂಲಕ "ಮೂಲ" ಮತ್ತು "ಅಣಕ"ಗಳೆರಡನ್ನು ವಿಶ್ಲೇಷಣೆಗೆ ಒಳಪಡಿಸುವುದು ಈ ತಂತ್ರದ ಇನ್ನೊಂದು ಬಗೆ. ಸ್ವಾಮಿ ಶ್ರದ್ಧಾನಂದ ನಂತಹ ಕುಪ್ರಸಿದ್ಧ ಕೊಲೆಪಾತಕನ ಬಗೆಗಿನ ನಮ್ಮ ತಿಳುವಳಿಕೆಯನ್ನು ವಿಸ್ತರಿಸುವುದು ಇದರ ಮತ್ತೊಂದು ಬಳಕೆ. ಇಲ್ಲೆಲ್ಲ ಕಥೆಗಾರರು ಓದುಗನ ಪ್ರಜ್ಞೆಯ ಭಾಗವಾಗಿರುವ ಸಂಗತಿಗಳನ್ನು ತಮ್ಮ ಕಲಾತ್ಮಕ ಉದ್ದೇಶಗಳಿಗಾಗಿ ದುಡಿಸಿಕೊಳ್ಳುತ್ತಾರೆ. "ವರ್ತಮಾನ"ವಾಗಿರುವ ವರ್ತಮಾನವನ್ನು ಕಲೆಯು ಒಳಗೊಳ್ಳುವ ಬಗೆಯು ಸತ್ಯನಾರಾಯಣ ಅವರ ವಿಶಿಷ್ಟ ಸಾಧನೆಯಾಗಿದೆ. ಓದುಗನ ಭಾವಕೋಶ ಹಾಗೂ ಕಥೆಗಾರನ ಭಾವಕೋಶವನ್ನು ಭಾಗಶಃ ಏಕತ್ರಗೊಳಿಸುವ ಈ ಹುನ್ನಾರವು ಕಥೆಗೆ ಅಧಿಕೃತತೆಯನ್ನು ಕೊಡಲು ಯತ್ನಿಸುತ್ತದೆ. ಅಲ್ಲದೆ ಕಥೆಯಂತಹ ಸೃಜನಶೀಲ ಚೌಕಟ್ಟಿನೊಳಗೆ ಸಂಸ್ಕೃತಿಯ ವಿವರಗಳನ್ನು ನೇರವಾಗಿ ವ್ಯಾಖ್ಯಾನ ಮಾಡುವ ಅವಕಾಶವನ್ನು ಕಥೆಗಾರರು ಪಡೆಯುತ್ತಾರೆ.

ಸತ್ಯನಾರಾಯಣ ರವರ ಕತೆಗಳ ಕೇಂದ್ರ ಪಾತ್ರಗಳು ಮತ್ತು ಅನುಭವಗಳು ಹೆಣ್ಣು ಮಕ್ಕಳದೇ ಆಗಿರುವುದು ಕುತೂಹಲಕರವಾದ ಸಂಗತಿ. ಸಾವಿತ್ರಿ, ಸಾವಿತ್ರಿಬಾಯಿ, ಗಾಯಿತ್ರಿ,

"ಕಸ್ತೂರಿಬಾಯಿ", ವಾಣಿ, ಇನ್ನೊಂದು ಸೈಕಲ್ ಬಯಸುವ ಕುಸುಮ ಹೀಗೆಯೇ ಹಲವು ಹೆಣ್ಣುಗಳ ಅಂತರಂಗವು ಈ ಕಥೆಗಳಲ್ಲಿ ಶೋಧಿತವಾಗಿದೆ. ಅಷ್ಟೇಕೆ, ಇವರ ಇತರ ಕಥೆಗಳಲ್ಲಿಯೂ ಈ ಸ್ತ್ರೀ ಅನುಭವದ ಬಗೆಗಿನ ಆಸಕ್ತಿಯನ್ನು ಕಾಣಬಹುದು. ಈ ಹೆಣ್ಣು ಮಕ್ಕಳನ್ನು ಗಂಡಸರು ಕಾಣುವ, ಬಯಸುವ, ನಡೆಸಿಕೊಳ್ಳುವ ಬಗೆಗಳನ್ನು ಗುರುತಿಸಿದಾಗಲೂ, ಪರಮನಃಪ್ರವೇಶದ ಮೂಲಕ ಅವರ ಮನೋಬಿಂಬಗಳನ್ನು ಗ್ರಹಿಸಲು ಸತ್ಯನಾರಾಯಣ ಪ್ರಯತ್ನಿಸಿದ್ದಾರೆ. ಇವರು ವೈಭವೀಕರಣಗೊಂಡ ತ್ಯಾಗಮೂರ್ತಿಗಳಲ್ಲ. ಪುರುಷ ಪಾತ್ರಗಳ ಅಗತ್ಯಕ್ಕೆ ತಕ್ಕಂತೆ ರೂಪಿತರಾದ ಏಕ ಆಯಾಮದ ಗೊಂಬೆಗಳೂ ಅಲ್ಲ. ಲೈಂಗಿಕ ಶೋಷಣೆಗೆ ಒಳಗಾದ ಶೋಷಿತೆಯರೂ ಮಾತ್ರವೇ ಅಲ್ಲ. ಸನ್ನಿವೇಶದ ಹಿಡಿತದಲ್ಲಿ ಅಸಹಾಯಕರಾಗಿ ನಲುಗುವಾಗಲೂ ಅವರಲ್ಲಿ ಹೊಸ ಕನಸುಗಳು ಚಿಗುರುತ್ತಿರುತ್ತವೆ. ಗೌರಿ, ವೆಂಕಟಲಕ್ಷ್ಮಿ, ಸಾವಿತ್ರಿ ಹೀಗೆಯೇ ಹಲವರು ಈ ಮಾತಿಗೆ ನಿದರ್ಶನಗಳು.

´ಸತ್ಯನಾರಾಯಣರವರ ಕಥೆಗಳು ವೈಯುಕ್ತಿಕ ಜೀವನ-ಕೌಟುಂಬಿಕ ಜೀವನ-ಸಾಮಾಜಿಕ ಜೀವನ ಇವುಗಳೆಲ್ಲವೂ ತಮ್ಮಷ್ಟಕ್ಕೆ ತಾವು ಸ್ವಯಂಸಾಧ್ಯತೆಗಳನ್ನು ಹೊಂದಿರುವುದನ್ನು- ಬಂಡಾಯದ ತತ್ವಗಳು ಹೋಗಲಿ, ಯಾವುದೇ ತಾತ್ವಿಕ ವಿಶ್ಲೇಷಣೆಗೆ ಬದ್ಧವಾಗಿರದೆ ನಿರಂಬಳವಾಗಿರುವುದನ್ನು ಪ್ರತಿಪಾದಿಸುತ್ತವೆ. ಇಲ್ಲಿ ಜೀವನ ವಿನ್ಯಾಸದ ಬಗ್ಗೆ ಯಾವುದೇ ತರ್ಕವು, ಯಾವುದೇ ತತ್ವ ವಿಶ್ಲೇಷಣೆಯು ಜೀವನ ವಿನ್ಯಾಸದ ಓಟವನ್ನು ಹಿಡಿಯಲಾಗದೆ, ಏದುಸಿರು ಬಿಡುತ್ತಾ ನಿಂತುಬಿಡುತ್ತವೆ. ಆದರೆ ಇದು ಕೇವಲ ಪಾರ್ಶ್ವಚಿಂತನೆಯಂತೆ ಸಾಧಿತವಾಗುತ್ತದೆ. ಎಲ್ಲಿಯೂ ಇಂತಹ ಪ್ರತಿಪಾದನೆಯ ಕಥೆಗಳ ಘೋಷಿತ ವಸ್ತುವಾಗುವುದಿಲ್ಲ. ಕಥೆಗಳ ಇಂಥ ನಿಲುವುಗಳಿಂದ ಚರಿತ್ರೆಯ ಮೂಲ ಘಟಕಗಳಾದ ಒಬ್ಬೊಬ್ಬ ವ್ಯಕ್ತಿಯ ಜೀವನ ವಿನ್ಯಾಸವು ಮಹತ್ವಗಳಿಸಿಕೊಳ್ಳುತ್ತದೆ. ಒಬ್ಬೊಬ್ಬ ವ್ಯಕ್ತಿಯ ಬದುಕನ್ನು (ಸಾವನ್ನು) ಒಂದು ಸಾಮಾನ್ಯೀಕೃತ ವಿನ್ಯಾಸದ ಅಪವಾದದಂತೆ ಕಾಣಲಾಗದು. ಇಡೀ ಬದುಕಿನ ಹರಹನ್ನು ಅದರ ವಿಫುಲ ಸಾಧ್ಯತೆಗಳನ್ನು ಅರಿಯಬೇಕಾದರೆ ಚರಿತ್ರೆಯ ಹರಹಿನಲ್ಲಿ ಭಾಗಿಗಳಾಗಿರುವ ಎಲ್ಲರ ಬದುಕಿನ ವಿನ್ಯಾಸಗಳನ್ನು ತಿಳಿಯಬೇಕಾಗುತ್ತದೆ. ಆದ್ದರಿಂದಲೇ ಕಥೆ ಹೇಳುವುದು –ಕಥೆ ಬೆಳೆಸುವುದು ಬದುಕಿನ ಹರಹಿನ ಸಮಗ್ರತೆಯ ಗ್ರಹಿಕೆಗೆ ಒಂದು ಅನಿವಾರ್ಯವಾದ ಮಾರ್ಗವಾಗುತ್ತದೆ. ಸ್ವತಃ

ಕಥೆಗಾರರಾದ ಪಾಟೀಲರು ಅನೇಕ ಕುತೂಹಲಕಾರಿಯಾದ ಸಂಗತಿಗಳನ್ನು ಹೇಳಿದ್ದಾರೆ. ಇಲ್ಲಿ ಎರಡು ವಿಷಯಗಳನ್ನು ಗಮನಿಸಬೇಕು. ಮೊದಲನೆಯದಾಗಿ ಯಾವುದೇ ಕಲಾವಿದನು ಬದುಕಿನ ಅನಂತ ಸಾಧ್ಯತೆಗಳನ್ನು ಅದರ ಎಲ್ಲ ವಿವರಗಳಲ್ಲಿ ತಿಳಿಯಲು ಸಾಧ್ಯವಿಲ್ಲ. ಅದು ಅವನ ಅನುಭವ ಹಾಗೂ ಆಲೋಚನೆಗಳ ಸೀಮಿತತೆಯಲ್ಲಿಯೇ ನಡೆಯಬೇಕು. ಆದ್ದರಿಂದ ಸಮಗ್ರತೆಯ ಭ್ರಮೆ ಹುಟ್ಟಿಸುವ ಬರವಣಿಗೆಯ ತಪ್ಪುದಾರಿಗೆ ಎಳೆಯುತ್ತಿರುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ಅನನ್ಯವಾದ ಅನುಭವಗಳಿಗೆ ಹಕ್ಕುದಾರನೆನ್ನುವುದು ವಿವರಗಳಲ್ಲಿ ಮಾತ್ರ ನಿಜವೇ ಹೊರತು ಒಟ್ಟಂದದಲ್ಲಿ ಅಲ್ಲ. ಸಾಮಾಜಿಕ ಸಂಗತಿಗಳು ಒಬ್ಬ ವ್ಯಕ್ತಿಯ ಪ್ರಜ್ಞೆ ಹಾಗೂ ವರ್ತನೆಗಳನ್ನು ಸ್ಥೂಲವಾಗಿ ನಿರ್ಧರಿಸಿರುತ್ತವೆ. ಅದಕ್ಕಿಂತ ಮುಖ್ಯವಾಗಿ ಕಥೆಯೊಳಗೆ ದಕ್ಕುವುದು ಪಾತ್ರಗಳಿಗೆ "ಆದ" ಅನುಭವವಲ್ಲ, ಬದಲಾಗಿ ಅದು ಕಲಾವಿದನೊಬ್ಬನ ಕಟ್ಟೋಣ. ಓದುಗನಿಗೆ ದಕ್ಕುವುದು ಮೂಲದಿಂದ ಪ್ರೇರಿತವಾದರೂ ಅವನದೇ ಆದ ಇನ್ನೊಂದು ಕಟ್ಟೋಣ. ಹೀಗಿರುವಾಗ ಯಾರ ಕಥೆಗಳನ್ನು ಯಾರು ಯಾರಿಗೆ ಹೇಳಿಯೂ ಸಮಗ್ರತೆ ಅಸಾಧ್ಯವಾಗಿಯೇ ಉಳಿಸುತ್ತದೆ.

ಸತ್ಯನಾರಾಯಣರವರು ನಜೀರಸಾಬು ಕತೆಯಲ್ಲಿ ಸೀತಾಲಕ್ಷ್ಮಿಯ ಆಸೆಗಳನ್ನು ವರ್ಣಿಸುತ್ತಲೇ, ಅವಳ ಚೈತನ್ಯಭರಿತ ವ್ಯಕ್ತಿತ್ವವನ್ನು ಚಿತ್ರಿಸುವ ಈ ಭಾಗದ ವಿವರಗಳು ಅಧ್ಭುತವಾಗಿವೆ. 'ತೆಳ್ಳಗೆ ಬೆಳ್ಳಗೆ ಸಪೂರವಾಗಿ ಚೂಟಿ ಸ್ವಭಾವದ ಹುಡುಗಿ ಸೀತಾಲಕ್ಷ್ಮಿ ಯಾವ ಕತೆ ಪುಸ್ತಕ ಓದಲಿ, ಯಾವ ಭಾಷಣ ಕೇಳಲಿ, ಚೆನ್ನಾಗಿರೋ ಒಂದು ಗಂಡು ಹೆಣ್ಣಿನ ಜೋಡಿ ಎದುರಿಗೆ ನೋಡಲಿ, ತಾನೂ ಯಾಕೆ ಹಾಗಾಗಿರಬಾರದು ಅಂದುಕೊಳ್ಳೋಳು. ಮನಸ್ಸು ಮಾಡಿದರೆ ಹಾಗಿರೋಕೆ ಸಾಧ್ಯ ಅಂತ ಅವಳ ಛಾತಿಯ ಸ್ವಭಾವವೂ ಹೇಳುತ್ತಿತ್ತು. ಸಂಗೀತ ಹೇಳಿಸ್ಕೋತೀನಿ, ಸೈಕಲ್ ಕಲೀತೀನಿ, ಟೈಪಿಂಗ್ ಕಲೀತೀನಿ, ಒಂದೇ ಎರಡೇ ಅವಳು ಮಾಡ್ತೀನಿ ಅಂತ ಹೇಳ್ತಾ ಇದ್ದದ್ದು. ಆದರೆ ಅವಳೊಬ್ಬಳೇ ಮಗಳಲ್ಲವಲ್ಲ ಕಪನೀಪತಯ್ಯನಿಗೆ' ಸೀತಾಲಕ್ಷ್ಮಿ ಕಪನೀಪತಯ್ಯನ ಸಾಲು ಹೆಣ್ಣು ಮಕ್ಕಳಲ್ಲಿ ಒಬ್ಬಳಾದ್ದರಿಂದ ಮಾತ್ರ ಅವಳ ಆಸೆ ತಿಕ್ಕಲುತನದ್ದಾಗಿ, ಸ್ವಲ್ಪ ಗಂಡುಬೀರಿತನದ್ದಾಗಿ ಕೂಡ ಕಾಣುವುದು. ಅದೇ ಅವಳು ಒಬ್ಬ ಹುಡುಗನಾಗಿದ್ದರೇ! ಆದರೆ ಈ ವಿಪರ್ಯಾಸ ಇಷ್ಟಕ್ಕೆ ನಿಲ್ಲುವುದಿಲ್ಲ. ಅವಳ ಸ್ವಾತಂತ್ರ ಮತ್ತು ಸ್ವಂತಿಕೆಗಳ ಹಂಬಲ, ವಸ್ತು, ಒಡವೆ, ಸ್ಥಾನಮಾನಗಳ ಆಸೆಯಾಗಿ ರೂಪಾಂತರಗೊಳ್ಳುವುದು

ಅನಿವಾರ್ಯವಾಗಿದೆ. ಇದು ಅವಳು ಮೋಹಿಸಿದ ಹೊಸ ಕಾಲದ ನಾಗರೀಕತೆಯ ದುರಂತ. ಸೀತಾಲಕ್ಷ್ಮಿಯ ಹಾಗೆ ಅವಳ ಗಂಡ ಶ್ರೀನಿವಾಸಯ್ಯನ ವ್ಯಕ್ತಿತ್ವ ಕೂಡ ಹಲವು ಬಣ್ಣಗಳ ಕೌದಿಯಾಗಿದೆ. ಅವನ ದಿನಚರಿಯಲ್ಲಿ ದೇವಸ್ಥಾನದ ಪೂಜೆ, ಮಾಸ್ತರಿಕೆ, ಕೋರ್ಟ್ ಕಛೇರಿ ಓಡಾಟ, ಚೀಟಿ ವ್ಯವಹಾರ ಮುಂತಾದೆಲ್ಲ ಸೇರಿಕೊಂಡಿವೆ. ಇವರಿಬ್ಬರಲ್ಲಿ ಇಷ್ಟವಾದ ಅಂಶವೆಂದರೆ ಗಂಡ ಹೆಂಡತಿ, ಪರಸ್ಪರರನ್ನು ಸೈರಿಸಿಕೊಂಡು, ಮಕ್ಕಳನ್ನೂ ಬೆಳಸಿ, ಸಂಸಾರದ ರಥ ನಡೆಸಿದ್ದು.

ಆ ಮುದುಕನ ನಿತ್ಯ ವಿಧಿಗಳು ಕತೆಯಲ್ಲಿ ಮನುಷ್ಯ ಸಂಬಂಧಗಳಿಗೆ ಎರವಾದ ಚೀಫ್ ಇಂಜಿನಿಯರ್‌ನ ಆಸೆಬುರುಕತನ, ಗೋಪಾಲನ ಪಡಿಪಾಟಲುಗಳು, ರೆಡ್ಡಿಯ ಹುಡುಕಾಟ ಮತ್ತು ಹುಸೇನನ ಹೆಂಡತಿಯ ಗೋಳಿನಷ್ಟೇ ಅರ್ಥಹೀನವಾಗಿವೆ. ನಿತ್ಯದ ದಿನಚರಿಯನ್ನು ಮೇಲಕ್ಕೆ ಎತ್ತಬಲ್ಲ ಶ್ರದ್ಧೆ, ಜೀವನದಲ್ಲೇ ಇಲ್ಲದಾಗ, ಲೇಖಕ ಅದನ್ನು ಆರೋಪಿಸಿಕೊಂಡು ಬರೆದರೆ ಸೋಗಲಾಡಿತನವಾಗುತ್ತದೆ. ಈ ದೃಷ್ಟಿಯಿಂದ ಸತ್ಯನಾರಾಯಣ ಅವರು ನಿಷ್ಠುರರು. ತಿರುಕನ ಕನಸಿನ ಕತೆಯಲ್ಲಿ ತಿರುಕ ರಾಜನಾಗಿ ಸುಖದಲ್ಲಿ ತೇಲಾಡುತ್ತಿರುವಾಗ ಸಹ ಅವನಿಗೆ ಎಚ್ಚರವಾಗಬಹುದಿತ್ತು. ಆದರೆ ರಾಜ್ಯಮದ, ತನುಜಮದ, ಯುವತಿಮದಗಳಲ್ಲಿ ಆತ ಮೈಮರೆತಿರುವಾಗಲೇ ಶತ್ರುಗಳು ದಂಡೆತ್ತಿ ಬಂದು, ಕನಸಿನಲ್ಲಿಯೂ ತಿರುಕ ಹೆದರಿ ಕಣ್ಣು ತೆರೆಯಬೇಕು. ಈ ಎಚ್ಚರದಲ್ಲಿ ಆತ ರಾಜತ್ವದ ಸ್ಥಿತಿಯನ್ನು ಮನಗಾಣುವುದರ ಜೊತೆ ತನ್ನ ತಿರುಕನ ನಿಜಸ್ಥಿತಿಯನ್ನು ಮತ್ತೆ ಕಂಡುಕೊಳ್ಳಬೇಕು.

ಇರುವುದು ಮತ್ತು ಕಾಣುವುದರ ನಡುವೆ ಇರುವ ಅಂತರ, ಸತ್ಯನಾರಾಯಣರ ಕತೆಗಳಲ್ಲಿ ಹಲವು ಬಗೆಯ ವಿನ್ಯಾಸಗಳನ್ನು ಪಡೆದುಕೊಳ್ಳುತ್ತದೆ. "ಸೀತೆ ಹೇಳಿದ ರಾಮನ ಗುರುತು" ಕತೆಯಲ್ಲಿ ಸೀತೆ ಹೇಳಿದ ಕತೆಯೇ ಒಂದು, ಹನುಮಂತ ಗ್ರಹಿಸಿದ್ದು ಇನ್ನೊಂದು. ಸೀತೆ ಹೇಳಿದ ಕಾಕಸುರ ವೃತ್ತಾಂತ ಮತ್ತು ತನ್ನ ಅರಣ್ಯವಾಸದ ನೆನಪುಗಳಲ್ಲಿ ಸೂಚ್ಯವಾಗಿರುವ ಶೋಕವನ್ನು ಹನುಮಂತ ಕೇಳಿಸಿಕೊಳ್ಳುವುದೇ ಇಲ್ಲ. ರಾಮನ ಪತ್ನಿ ಎಂಬುದರ ಹೊರತಾಗಿ ತನಗೆ ಒಂದು ವ್ಯಕ್ತಿತ್ವವೇ ಇಲ್ಲವೆ ಎಂಬ ಸೀತೆಯ ಅಳಲು ಅದರ ಧ್ವನಿ ಕೇಳಿಸಿಕೊಳ್ಳುವವರೇ ಇಲ್ಲದೇ ಮೂಕ ವೇದನೆಯಾಗುತ್ತದೆ.

"ಮಾರ್ಕ್‌ಟುಲಿ ಹೇಳಿದ ಮೇಲುಕೋಟೆ"ಯ ಕತೆಯಲ್ಲಿ ಟುಲಿಯ ಪ್ರಕಾರ ಇನ್ನೊಬ್ಬನ ಸ್ವಾತಂತ್ರ್ಯವನ್ನು ಗೌರವಿಸುವುದು ಎಂದರೆ ಅವನ ವ್ಯಕ್ತಿತ್ವದ ಸ್ವಾಯತ್ತತೆಯನ್ನು ಕೂಡ ಗೌರವಿಸುವುದೇ ಹೊರತು, ನಮ್ಮ ಅಪೇಕ್ಷೆಗೆ ತಕ್ಕಂತೆ ಅದು ಎಷ್ಟೇ ಕ್ರಾಂತಿಕಾರಿಯಾಗಿರಲಿ ಬಾಳಲು ಒತ್ತಾಯಿಸುವುದಿಲ್ಲ. ಮೇಲುಕೋಟೆಯಲ್ಲಿ ಡಿ.ಸಿ. ಭರತ್‌ಕುಮಾರ್ ಹರಿಜನರ ಹುಡುಗನಿಗೆ ದೇವಸ್ಥಾನದ ಅರ್ಚಕನ ಕೆಲಸ ಕೊಡಿಸಿದ್ದು, ನಂತರ ಆ ಬಗ್ಗೆ ಹೊಂದಾಣಿಕೆ ಮಾಡಿಕೊಂಡಿದ್ದು ಟುಲಿಯ ಮಟ್ಟಿಗೆ ಇದರಲ್ಲಿ ಸರಿ-ತಪ್ಪುಗಳ ತೀರ್ಮಾನದ ಪ್ರಶ್ನೆಯೇ ಇಲ್ಲ. ನಾವು ಬಯಸುವ ಬದಲಾವಣೆ ಕೂಡ ಸಂದಿಗ್ಧಗಳಿಲ್ಲದೇ ಬರುವುದಿಲ್ಲ ಎನ್ನುವುದು ಟುಲಿ ಅನುಭವದಿಂದ ಕಂಡುಕೊಂಡ ಸತ್ಯವಾಗಿದೆ.

ಸತ್ಯನಾರಾಯಣ ಅವರು "ಮುದುಕಿ ಹೇಳಿದ ಸರ್ ಎಂ.ವಿ. ಕಥೆ, ಸರ್.ಎಂ.ವಿ. ತಿಳಿದ ಮುದುಕಿ ಕಥೆ"ಯ ಕೊನೆಯ ಭಾಗದಲ್ಲಿ ರಾಮಾಯಣದಲ್ಲಿ ಬರುವ ಅಳಿಲಿನ ಹಾಗೆ, ತಮ್ಮ ಪಾತ್ರವನ್ನು ಕಥೆಯಲ್ಲಿ ಸಾರ್ಥಕ್ಯಗೊಳಿಸಿಕೊಂಡಿದ್ದಾರೆ. ಸರ್.ಎಂ.ವಿ. ಅವರು ಧನಸಹಾಯದ ನೆರವಿನಿಂದ ಕೊಂಡುಕೊಂಡ ಮುದುಕಿಯ ರುಬ್ಬುವ ಕಲ್ಲನ್ನು, ಸರ್.ಎಂ.ವಿ. ಅವರ ಮುದ್ದೇನಹಳ್ಳಿಯಲ್ಲಿ ಮನೆ ಪ್ರದರ್ಶನಕ್ಕೆ ತಲುಪಿಸಿ ತಮ್ಮ ಕೈಲಾದ ಸಾರ್ಥಕ್ಯ ಕೆಲಸ ಮಾಡಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ ಯಾರಿಗೂ ತಿಳಿಯದ ಸರ್.ಎಂ.ವಿ. ಅವರ ವ್ಯಕ್ತಿತ್ವವನ್ನು ಎತ್ತಿ ಹಿಡಿಯುವಂತಹ ಈ ಕಥೆಯನ್ನು ಮುದುಕಿಯ ಬಳಿ ಕೇಳಿಕೊಂಡು ಸುಮ್ಮನಾಗದೇ, ಅನೇಕರಿಗೆ ಪಸರಿಸುವ ಅವರ ಪ್ರಯತ್ನ ನಿಜಕ್ಕೂ ಮೆಚ್ಚುಗೆಗೆ ಪಾತ್ರವಾಗುವಂತಹುದು.

ಸತ್ಯನಾರಾಯಣರವರು "ನಿಮ್ಮ ಮೊದಲ ಪ್ರೇಮದ ಕಥೆ" ಯಲ್ಲಿ ಪುಟ್ಟರಾಜು, ನಾಟಕದ ಪಾತ್ರಕ್ಕೆಂದು ಬಂದ ರತ್ನಿ, ಅವಳ ತಾಯಿ ಸುಶೀಲ, ಎಲ್ಲರನ್ನು ನೈಜವಾಗಿ ಕಟ್ಟಿಕೊಡುವಲ್ಲಿ ಲೇಕಕರು ಯಶಸ್ವಿಯಾಗಿದ್ದಾರೆ. ಪುಟ್ಟರಾಜುವಿನ ಪ್ರೇಮಕಥೆಯನ್ನು ನಾವು ವಿಮರ್ಶಾತ್ಮಕವಾಗಿ ನೋಡಿದರೆ, ಪುಟ್ಟರಾಜುವಿನ ಗೆಳೆಯರು, ಗ್ರಾಮಸ್ಥರು, ನೆಂಟರು ಅಂದರೇ ಚಿಕ್ಕಮ್ಮ, ಸೋದರತ್ತೆ, ಇವರೇ ಸೇರಿ ಉತ್ಪ್ರೇಕ್ಷೆಗೊಳಿಸಿ ತಯಾರಿಸಿದ್ದೇ ಜಾಸ್ತಿ ಎನ್ನುವಂತಿದೆ. ಭಾರತೀಯ ಜಾತಿ ಪದ್ಧತಿ ಹಾಗೂ ನಾಟಕ ಕಲಾವಿದರನ್ನು ನಮ್ಮ ಸಮಾಜ ಕಾಣುವ ದೃಷ್ಟಿಕೋನ ಹಳೆಯ ಸಂಸ್ಕೃತಿ ಎಲ್ಲವನ್ನು ಅಚ್ಚುಕಟ್ಟಾಗಿ ತಮ್ಮದೇ ಅನುಭವ ಎನ್ನುವ ಹಾಗೆ ಕಟ್ಟಿಕೊಟ್ಟಿದ್ದಾರೆ. ಹಾಗೆಯೇ 'ಯಕ್ಷಪ್ರಶ್ನೆ'ಯಲ್ಲಿಯ ಶಾಸ್ತ್ರಿಗಳು ಹೇಳುವ, ಕಾಲವನ್ನು ಸಾರಾಂಶದಲ್ಲಿ ಬದುಕಲೂ

ಬಾರದು, ನೋಡಲೂ ಬಾರದು ಎಂಬ ಮಾತು ಪುಟಗಟ್ಟಲೆ ವ್ಯಾಖ್ಯಾನವನ್ನು ಬಯಸುತ್ತದೆ. ಪುರಾಣ ವರ್ತಮಾನವಾಗುವ ಪರಿಯನ್ನು 'ವೈಶಂಪಾಯನದಲ್ಲಿ ಪಾಲು' ಕತೆಯಲ್ಲಿ ನೋಡಬಹುದು. ಬದಲಾಗಿದ್ದೇವೆಂದು ಪೋಸು ಕೊಡುವ ಮೇಲ್ವರ್ಗದವರು ಆಂತರ್ಯದಲ್ಲಿ ಹೇಗೆ ಇನ್ನೂ ಬದಲಾಗದೇ ಇರುತ್ತಾರೆ ಎಂಬುದನ್ನು 'ಭಾಷೆ ಮತ್ತು ನಗು'ವಿನಲ್ಲಿ ನೋಡಬಹುದು. ಅಮೇರಿಕಾದಲ್ಲಿ ಸಂಶೋಧನೆ ಮತ್ತು ಅಮೇರಿಕದಲ್ಲಿ ಸೀಸದ ಕಡ್ಡಿ ಕತೆಗಳು ಜಗತ್ತಿನ 'ದೊಡ್ಡಣ್ಣ'ನ ದೌರ್ಬಲ್ಯವನ್ನು ಬಯಲು ಮಾಡುತ್ತವೆ.

ಸಾಹಿತಿ ಮತ್ತು ವ್ಯಕ್ತಿ ಒಬ್ಬನೇ ಕೂಡ ಹೌದು. ವ್ಯಕ್ತಿತ್ವದ ಛಂದಸ್ಸೇ ಆತನ ರಚನೆಯಲ್ಲೂ ಒಡಮೂಡುವುದು ಅನಿವಾರ್ಯ ಎನ್ನುವುದನ್ನು ಒಪ್ಪುತ್ತಲೇ ಇಲ್ಲೊಂದು ಭಿನ್ನತೆ ಇದೆ ಎನ್ನುವುದನ್ನೂ ಕಂಡುಕೊಳ್ಳಬೇಕು. ಅಂದರೆ, ನನ್ನ ಓದುಗ ಯಾರು ಎಂದು ನಾನು ಭಾವಿಸಿಕೊಂಡಿರುತ್ತೇನೆ ಎನ್ನುವುದರ ಮೇಲೆ ಅದು ನಿಂತಿರುತ್ತದೆ. ಆದರೆ ಹೆಚ್ಚಿನವರಿಗೆ ಓದುಗ ಎಂಬುದು ಸಮಷ್ಠಿಯೇ ಹೊರತು ವ್ಯಕ್ತಿಯಲ್ಲ. ಹೆಚ್ಚಿನವರಿಗೆ ಮತ್ತು ಹೆಚ್ಚಿನ ಸಂದರ್ಭದಲ್ಲಿ ಎಂದು ಹೇಳಬೇಕು. ಯಾಕೆಂದರೆ, ಎಲ್ಲರಿಗೂ ಕೆಲವೊಂದು ಸಂದರ್ಭದಲ್ಲಿ ಈ ಓದುಗ ಸಮಷ್ಠಿಯಿಂದ ಆಯ್ದ ಕೇವಲ ವ್ಯಕ್ತಿಯಾಗಿಯೂ, ನಿರ್ದಿಷ್ಟ ವ್ಯಕ್ತಿಯಾಗಿಯೂ ಆವಿರ್ಭವಿಸುವುದು ಇದ್ದೇ ಇರುತ್ತದೆ.

ಹೀಗೆ ಎಲ್ಲೋ ಕೆಲವೆಡೆ ಅದು ವ್ಯಕ್ತಿ ಕೂಡ ಹೌದು. ಬರೆಯುವ ಸಂಭ್ರಮವನ್ನು ಅನುಭವಿಸಿದವರಿಗೆಲ್ಲ ಗೊತ್ತಿರುವ ಈ ಮಲ್ಟಿ ಶಿಫ್ಟ್ ಏನಿದೆ, ಅದೇ ಈ ಆತ್ಮೀಯವೆನ್ನಿಸುವಾಗಲೂ ಅಷ್ಟು ದೂರ ಉಳಿಸಿಕೊಳ್ಳುವ ಒಂದು ಶೈಲಿಗೆ ಕಾರಣವಾಗುತ್ತದೆ ಎಂದು ನಾನು ಅಂದುಕೊಂಡಿದ್ದೇನೆ.

## ಅಧ್ಯಾಯ-೫

## ಸಮಕಾಲೀನ ಮತ್ತು ಪೂರ್ವಕಾಲೀನ ಬದುಕಿನ ಅವಲೋಕನ

ಕತೆ ಬರೆಯುವುದು ಒಂದರ್ಥದಲ್ಲಿ ತೀರಾ ಅಸಹಜ ವಿದ್ಯಮಾನ. ಮನುಷ್ಯನನ್ನು ಹೊರತು ಪಡಿಸಿದರೆ ಜಗತ್ತಿನ ಬೇರೆ ಯಾವುದೇ ಜೀವಿಗೆ ಹೀಗೆ ತನ್ನದೇ ಕಲ್ಪನೆಯ ಅಥವ ಕನಸಿನ ಜಗತ್ತೊಂದರ ವಿದ್ಯಮಾನಗಳನ್ನು ಒಂದು ಅರ್ಥಪೂರ್ಣ ಹಂದರದಲ್ಲಿಟ್ಟು ಭಾಷೆಯ ಮೂಲಕ ಅದನ್ನು ಸಹಜೀವಿಯೊಂದಿಗೆ ಹಂಚಿಕೊಳ್ಳುವ ಸಾಧ್ಯತೆ ಇದೆ ಅನ್ನಿಸುವುದಿಲ್ಲ. ಆದರೆ ಮನುಷ್ಯ ಇದನ್ನು ಮಾಡುತ್ತ ಬಂದಿದ್ದಾನೆ.. ಶ್ರೀರಾಮ ಇದ್ದನೋ, ಇರಲಿಲ್ಲವೋ ಅಥವಾ ಶ್ರೀ ಕೃಷ್ಣ ಇದ್ದನೋ ಇರಲಿಲ್ಲವೋ ಎಂಬ ಪ್ರಶ್ನೆ ಬಿಡಿ. ಅವರು ರಾಮಾಯಣ ಅಥವಾ ಮಹಾಭಾರತದಲ್ಲಿ ಇದ್ದಂತೆ ಅಥವಾ ಸದ್ಯದ ನಮ್ಮ ಗ್ರಹಿಕೆಗಳಿಗೆ ಲಭ್ಯರಾದಂತೆಯೇ ಇದ್ದರು. ಎಂದು 'ಇದಂಇತ್ಥಂ' ಎನ್ನುವಂತೆ ಹೇಳುವುದು ಕಷ್ಟ. ಅವರನ್ನು ಚಿತ್ರಿಸಿದ ಕೃತಿಕಾರನಿಗೆ ಅವರ ವ್ಯಕ್ತಿತ್ವದ ಎಷ್ಟನ್ನು ಚಿತ್ರಿಸಬೇಕು ಎಂಬುದು ಸಾಧ್ಯವಾದ ಒಂದು ವ್ಯಕ್ತಿತ್ವವೇ. ಇವತ್ತು ನಮಗೆ ನಮ್ಮ ಶ್ರೀರಾಮ ಇಲ್ಲವೇ ಶ್ರೀ ಕೃಷ್ಣ. ಆದರೆ ಇದು ವಾಸ್ತವದಿಂದ ಖಚಿತವಾಗಿ ಎಷ್ಟು ದೂರ ಎಂದು ನಿಖರವಾಗಿ ಹೇಳಬಲ್ಲವರಾರು? ಸತ್ಯನಾರಾಯಣ ಇಂಥ ಮೂಲ ಪ್ರಶ್ನೆಗಳಿಗೆ ಲಗ್ಗೆ ಇಡುತ್ತ ತಮ್ಮ ಕಥಾನಕವನ್ನು ನಿರೂಪಿಸುತ್ತಾರೆ. ಸಾಧ್ಯವಾದ ಮಟ್ಟಿಗೂ ಈ ಒಣ ಚರ್ಚೆಯನ್ನು ಅವರು ಕಲಾತ್ಮಕವಾಗಿಸುತ್ತ ಸಾಗಿದ ಪರಿಯೇ ಒಂದು ಅಚ್ಚರಿ.

ಸತ್ಯನಾರಾಯಣ ಅವರು 'ನಮ್ಮ ಕಾಲದ ಜಾನಪದ ಕತೆ' ಎಂಬ ಹೆಸರಿನ ನಾಲ್ಕನೆಯ ಅಧ್ಯಾಯದಲ್ಲಿ ಐದು ಮಂದಿ ಬರಹಗಾರರು ತಮ್ಮ ತಮ್ಮ ಬದುಕಿನ ಸ್ಥೂಲ ಹಿನ್ನೋಟ ನೀಡುತ್ತಾರೆ. ಅವರವರ ಆಸೆ, ಕನಸು, ಆದರ್ಶ ಬಾಲ್ಯದಲ್ಲಿ ಇದ್ದದ್ದು ಈಗ ಆಗಿರುವುದು ಎಲ್ಲದರ ಕುರಿತು ಹೇಳುತ್ತಾರೆ. ಇಲ್ಲಿ ಕತೆ, ಕತೆಗಾರನ ಬದುಕು ಮತ್ತು ಸ್ವಾನುಭವ ಹಾಗೂ ಅವನು ಕಟ್ಟುವ ಕಥಾನಕ-ಇವುಗಳ ನಡುವಿನ ಕಂದಕವನ್ನು ಹೇಳುತ್ತಲೇ ಇಬ್ಬರು ಮುದುಕರ ನಡುವೆ ಕತೆಯೊಂದರ ಕುರಿತಾಗಿಯೇ ನಡೆಯುವ ಹೊಡೆದಾಟದ ಪ್ರಸಂಗ ಬರುತ್ತದೆ. ನಮ್ಮ ಕಾಲದ ಜನಪದ ಕತೆ ಎಂದು ಹೇಳಿಕೊಂಡು ಇಬ್ಬರೂ ಒಂದು ಕತೆಗಾಗಿ 'ನನ್ನದು' ಎಂಬ ಪ್ರತಿಷ್ಠೆಯನ್ನೇ ಮುಂದೆ ಮಾಡಿಕೊಂಡು ಜಗಳವಾಡುವುದನ್ನು ಕತೆಯ ಸಹಿತ

ಸತ್ಯನಾರಾಯಣರು ಕಾಣಿಸಿ ಬೆಚ್ಚಿಬೀಳಿಸುತ್ತಾರೆ! ಇಲ್ಲಿನ ವಂದನಾಳ ಕತೆ ಯಾರ ಹೃದಯವನ್ನಾದರೂ ನಾಟುವಂಥದ್ದು. ಆದರೆ ಅದಕ್ಕಿಂತ ಬರೆದವರ, ಹೇಳುವವರ ಜಗಳವೇ ಮುಖ್ಯವಾಗಿ ಬಿಡುವುದೂ ಸಾಧ್ಯ!.

ಹಾಗೆಯೇ ರಷ್ಯಾ ಒಡೆಯುವುದು ಇಲ್ಲಿ ಒಂದು ರೂಪಕವಾಗುವ ಬಗೆ ಮತ್ತು ಅದು ರೂಪಕವಾಗಿರುವುದನ್ನು ಕೊಂಚ ವ್ಯಂಗ್ಯ ಬೆರೆತ ಧ್ವನಿಯಲ್ಲಿ ಕತೆಯನ್ನಾಗಿಸಿ ಕತೆಗೊಂದು ವಿಮರ್ಶೆ ಅಥವಾ ರಿವ್ಯೂ ನೀಡುತ್ತಿರುವ ರೂಪದಲ್ಲಿ ವಿಶ್ಲೇಷಿಸುವುದೂ ನಮ್ಮನ್ನು ಚಿಂತನೆಗೆ ಆಹ್ವಾನಿಸುವಂತಿದೆ.

ಇಷ್ಟಾಗಿಯೂ ಇಲ್ಲಿ ಅದ್ಭುತವಾದ ಕತೆ, ಏಕಸೂತ್ರದ್ದೇ ಎಂದು ನಿರೂಪಿಸಬಹುದಾದ ಒಂದೆಳೆಯ ಕಥಾನಕ ಇಲ್ಲ. ಕುತೂಹಲ ಹುಟ್ಟಿಸುವ ಒಂದು ಕತೆಯ ಬೆಳವಣಿಗೆಯಾಗಲೀ(ಒಂದು ಕಥಾನಕದ ಮೂಲಕ), ಒಂದು ಮುಖ್ಯ ಪಾತ್ರದ ಒಳತೋಟಿಗಳ ಚಿತ್ರವಾಗಲೀ(ಗೌರಿ), ಸಾಮಾಜಿಕ, ತಾತ್ವಿಕ, ಆಯಾಮವಿರುವ ಕಲಾತ್ಮಕ ಅಭಿವ್ಯಕ್ತಿಯಾಗಲೀ(ರಾಜಧಾನಿಯಲ್ಲಿ ಶ್ರೀಮತಿಯರು) ಇಲ್ಲಿಲ್ಲ. ಆದರೆ ಸಾಹಿತ್ಯ, ಸಾಹಿತಿ, ಅವನ ಬರೆಯುವ ಕ್ರಿಯೆ, ವಿಮರ್ಶೆಯ-ಮೆಚ್ಚುಗೆಯ ನಿರೀಕ್ಷೆ, ಕತೆಯ ಶರೀರ, ಕತೆಗಾರ ಅದಕ್ಕೆ ಚೌಕಟ್ಟು ಒದಗಿಸಲು ಹೋಗಿ ಸತ್ಯಾನ್ವೇಷಣೆಯ ಹೆಸರಲ್ಲಿ ಸತ್ಯದಿಂದ(ದಕ್ಕುವ ಸತ್ಯ ಎಂಬುದೊಂದು ಇದ್ದರೆ-ಎಂಬ ಸಕಾರಣ ಅನುಮಾನದೊಂದಿಗೆ) ದೂರವಾಗುವ ವಿಪರ್ಯಾಸಗಳನ್ನು ಕಾಣಿಸುತ್ತಲೇ ಈ ಕಥಾನಕ ಸೂಕ್ಷ್ಮವಾಗಿ ತನ್ನ ಒಡಲೊಳಗೆ ಸೇರಿಸಿಕೊಳ್ಳುವ ಸಾಮಾಜಿಕ ಆಯಾಮ ತುಂಬ ಸೂಚ್ಯವಾಗಿರುವುದು ಒಂದು ಸಿದ್ಧಿ ಎಂದೇ ಹೇಳಬೇಕು.

ಇದರಲ್ಲಿಯೂ ಎರಡು ಕತೆಗಳು ಎದುರು ಬದುರಾಗಿ, ಒಂದಾಗಬೇಕೆಂದು ಕಾಯುತ್ತಿವೆ. ಒಂದು ಲೋಕನಾಯಕ ಜೆ.ಪಿ.ಯವರ ಕತೆ. ಇನ್ನೊಂದು ಅವರ ಶಿಷ್ಯ ಮೋಹನನ ಕತೆ. ಮೈಸೂರು ಸಿಲ್ಕ್ ಸೀರೆಯಲ್ಲಿ ಮೋಹನ ಕಾಣುವ ಸಾರ್ಥಕತೆ ಜೆ.ಪಿ.ಯವರಿಗೆ ದಕ್ಕಲಿಲ್ಲ. ಮೇಲುಕೋಟೆಯ ಜಗುಲಿಯ ಮೇಲೆ ಅವರು ಕೈಗೊಂಡಿದ್ದ ಪ್ರತಿಜ್ಞೆ ನೆರವೇರಲಿಲ್ಲವೆನ್ನುವುದು ಇತಿಹಾಸದ ಸತ್ಯ. ಮೋಹನನದು ಇತಿಹಾಸದ ಸತ್ಯವಲ್ಲ. ಅದೊಂದು ಸಂಭಾವ್ಯದ ಸತ್ಯ. ಇಷ್ಟೇ. ಮೋಹನನ ಸಾರ್ಥಕತೆ ಅಂತರಂಗಕ್ಕೆ

ಗೋಚರವಾದರೂ ಅದರ ಸತ್ಯವನ್ನು ಕೈಯಲ್ಲಿ ಹಿಡಿಯಲು ಬರುವುದಿಲ್ಲ. ಜೆ.ಪಿ. ಕೂಡ ಮೋಹನ ಉಡುಗೊರೆಯಾಗಿ ತಂದ ಸೀರೆಯ ಮೇಲೆ ಕೈಯಾಡಿಸಿ ಸಾರ್ಥಕತೆಯನ್ನು ಕ್ಷಣಕಾಲ ಅನುಭವಿಸುತ್ತಾರೆ. ಆದರೆ ಎಂಥ ಸಾರ್ಥಕತೆಯ ಮೇಲೂ ಅಪೂರ್ಣತೆಯ ನೆರಳು ಬಿದ್ದಿರುತ್ತದೆ.

ಸತ್ಯನಾರಾಯಣ ಅವರು 'ಲಿಂಗಾಯತರ ಸ್ವಯಂವರ' ಅನ್ನುವ ಕತೆಯಲ್ಲಿ ಗಂಡು ಹೆಣ್ಣು ಸಂಬಂಧದ ಮದುವೆ, ಕಾಮ, ವಿಚ್ಛೇದನ, ವಿವಾಹೇತರ ಸಂಬಂಧ ಮತ್ತು ಸಂಬಂಧಗಳ ಪರ್ಯಾಯ ಸಂಭವನೀಯತೆಗಳ ಕುರಿತ ಯೋಚನೆ ಹುಟ್ಟಿಸುವ ಪಾಪಪ್ರಜ್ಞೆ ಮತ್ತು ಮನುಷ್ಯನ ಆಳದ ಹಪಹಪಿಗಳ ಒಳ ಅರಿವು ಇವುಗಳ ಬಗ್ಗೆ ಇದೆ. ಮನುಷ್ಯನ ಆಳದ ಸಣ್ಣತನ, ನೀಚತನ ಮತ್ತು ಅವುಗಳ ಸಹಜತ್ವ ಕೂಡಾ ಬದುಕಿನ ಅನಿವಾರ್ಯ ಅಂಗವೇ ಎಂಬ ಅರಿವು ಇಲ್ಲದೇ ಹೋದರೆ ಏನಾದೀತು.?

ಆ ಏನಾದೀತು ಎಂಬ ಪ್ರಶ್ನೆಯಲ್ಲಿರುವ ಸಾಧ್ಯತೆಗಳ ಮಹಾಪೂರವನ್ನೇ ನಮ್ಮೆದುರು ತೆರೆದಿಡುವ ಅಧ್ಯಾಯ ಗೌರಿಯೆಂಬ ಮೂರು ಟಿಪ್ಪಣಿಗಳು. ಹಾಗೆಯೇ ಇಲ್ಲಿ ತೆರೆದುಕೊಳ್ಳುವ ವಿಭಿನ್ನ ಎನಿಸುವ ಮೂರು ಟಿಪ್ಪಣಿಗಳೂ ಎಲ್ಲೋ ಸಂಧಿಸುತ್ತವೆ ಮತ್ತು ಒಂದೇ ಎನಿಸುತ್ತವೆ. ಹಾಗೆಯೇ ಈ ಮೂರು ಟಿಪ್ಪಣಿಗಳು ಕತೆಯಲ್ಲಿ ಬರುವ ಎಷ್ಟೋಂದು ಕತೆ, ಎಷ್ಟೋಂದು ಮದುವೆಗಳಲ್ಲಿ, ಯಾರೊಬ್ಬರದೂ ಆಗಬಹುದಾದ್ದು ಅನಿಸಿದರೆ ಅಚ್ಚರಿಯೇನಿಲ್ಲ. ಈ ಸಂಬಂಧ ಇದೆ ಎಂದರೆ ಇದೆ, ಇಲ್ಲ ಎಂದರೆ ಇಲ್ಲ.

ಸತ್ಯನಾರಾಯಣ ಅವರ 'ವಿಚ್ಛೇದನಾ ಪರಿಣಯ' ಕಥೆಯಲ್ಲಿ ನಮ್ಮ ಜಗತ್ತಿನಲ್ಲಿ ಮದುವೆಗಿಂತ ಕುತೂಹಲ ಹುಟ್ಟಿಸುವುದು ವಿಚ್ಛೇದನ. ಈ ಮಿಗಿಲಾದ ಕುತೂಹಲ ಹುಟ್ಟಿಸುವ ಕಾರಣದಿಂದಾಗಿಯೂ ವಿಚ್ಛೇದನವೆನ್ನುವುದು ಯುಗಧರ್ಮ ಹಾಗೂ ಮನೋಧರ್ಮ ಸೂಚಕದಂತೆ ಕಾಣಿಸುವುದಿದೆ. ಅಂಥ ಪ್ರಭಾವಳಿಯ ಪರಿಣಾಮವಾಗಿ ಹುಟ್ಟಿಕೊಳ್ಳುವ, ಸುತ್ತುವರಿಯುವ ತಳಮಳದ, ಧಾವಂತದ, ಅತಿರೇಕದ, ಅನುಮಾನಶೀಲದ ತರಹೇವಾರಿ ಕಥೆಗಳು ನಾವು ಇರುವ ಕಾಲದ ಮತ್ತು ಬಹುಶಃ ನಾವು ದಾಟಲಾರದ ಕಾಲದ ಕಥೆಯೊಂದನ್ನು ಕೂಡಿಸುತ್ತಿವೆ, ಎನ್ನುವಂತೆ ಈ ಕತೆಯನ್ನು ಕಟ್ಟಿದ್ದಾರೆ ಸತ್ಯನಾರಾಯಣ ಅವರು.

ಇಲ್ಲಿನ ಹುಡುಕಾಟವನ್ನು ಕತೆಗಾರರು ಕಥೆಗಾಗಿನ ಹುಡುಕಾಟ ಎಂದು ಹೇಳಿದ್ದರೂ, ಅಂತಿಮವಾಗಿ ಅದು ಬದುಕಿನ ಕುರಿತ ಹುಡುಕಾಟವೇ ಆಗಿದೆ. ಜೀವನವೆನ್ನುವುದರ ಸೊಗಸು, ಸಾರ್ಥಕತೆಯ ಕಕ್ಷೆಯಲ್ಲಿ ಜೀವನದ ಸೋಲು, ಒಡಕು, ವಿಕಾರತೆ ಕಾಣಿಸಿಕೊಂಡುಬಿಟ್ಟಾಗ ತಲೆದೋರುವ ಸಂಘರ್ಷಕ್ಕೆ ಪರಿಹಾರ ಇದೆಯಾ ವಾಸ್ತವದಲ್ಲಿ? ಅದು ಕಾನೂನಿನ ವ್ಯಾಪ್ತಿಯಲ್ಲಿ ಬಗೆಹರಿಸಿಕೊಳ್ಳುವಷ್ಟು ಸುಲಭದ, ವ್ಯಾವಹಾರಿಕ ಸಂಗತಿಯಾ? ಹೀಗೆ ಆಳದ ಕಳವಳಗಳನ್ನು ಉಳಿಸಿ, ಇಷ್ಟೇ ಸಾಕು; ಇದರಾಚೆಯದ್ದು ಅಪ್ರಾಮಾಣಿಕವಾಗಿಬಿಟ್ಟೀತು ಎಂದು ನಿಂತುಬಿಡುವ ಈ ಕಥಾನಕ, ಅನಿವಾರ್ಯ ತಿರುವುಗಳಲ್ಲಿ ಬದುಕು ಅಪ್ರಾಮಾಣಿಕವಾಗುವುದರ ಬಗೆಗಿನ ಸಂಕಟವನ್ನೇ ಒಳಗೊಂಡು ನಡೆಯುತ್ತದೆ.

ಸತ್ಯನಾರಾಯಣ ಅವರು ಕಥೆಯಲ್ಲಿ ದಾಂಪತ್ಯದ ಬಿಕ್ಕಟ್ಟುಗಳನ್ನು ಮಾತ್ರ ಹೇಳುತ್ತಿಲ್ಲ; ಇಡೀ ಕೌಟುಬಿಂಕ ವ್ಯವಸ್ಥೆಯನ್ನೇ ವಿಷವರ್ತುಲದಂಥದೊಂದು ಕ್ಷೋಭೆ ಅಡರಿಕೊಂಡಿರುವ ವಿಷಾದವನ್ನು ಧ್ವನಿಸುತ್ತದೆ. ಸಾಕಷ್ಟು ಚೆನ್ನಾಗಿಯೇ ಜೀವನ ನಡೆಸಿದ್ದ 'ಕಾಶೀಪತಯ್ಯ-ಕಮಲ'ರ ದಾಂಪತ್ಯದಲ್ಲೂ ಇಳಿವಯಸ್ಸಿನಲ್ಲಿ ಈ ದಾಂಪತ್ಯದಾಚೆಗಿನ ಆಕರ್ಷಣೆಯ ನೆರಳು ಕಾಡುವುದಕ್ಕೆ ಶುರುವಾಗುತ್ತದೆ. ವಿಚ್ಛೇದನಕ್ಕೆ ಅವರಿಬ್ಬರೂ ಯೋಚಿಸುತ್ತಿದ್ದ ಹೊತ್ತಿನಲ್ಲೇ ಕಮಲ ಹೃದಯಾಘಾತದಿಂದ ತೀರಿಹೋಳ್ಳುತ್ತಾಳೆ. ಉದ್ದಕ್ಕೂ ಹೆಂಡತಿಯನ್ನು ಹಿಂಸಿಸುತ್ತಲೇ ಇದ್ದ, ಒಂದು ಸಲ ಮಾತುಬಿಟ್ಟರೆ ಮತ್ತೆ ಮಾತಾಡುವುದಕ್ಕೆ ವರ್ಷಗಟ್ಟಲೆ ತೆಗೆದುಕೊಳ್ಳುತ್ತಿದ್ದ 'ನರಸಿಂಹಯ್ಯನಿಗೂ' ಮನೆತುಂಬ ಮಕ್ಕಳಾಗುತ್ತವೆ. ಆ ಮಕ್ಕಳೇ ತಂದೆಯ ಬಗ್ಗೆ ಇನ್ನಿಲ್ಲದಷ್ಟು ಅಸಹ್ಯಗೊಳ್ಳುತ್ತವೆ. ಇಷ್ಟೆಲ್ಲ ಕಥೆಗಳಿಗೆ ಕಣ್ಣಾಗಿರುವಂತೆ ತೋರುವ ವಾಡೆಯ ವಸ್ತುವಿಶೇಷಗಳಲ್ಲೊಂದಾದ ನಿಲುವುಗನ್ನಡಿ ಒಂಟಿಯಾಗಿ ಅರಮನೆಯ ಲಾನ್‌ನಲ್ಲೇ ಉಳಿದುಬಿಟ್ಟಿರುವುದು ಈ ಕ್ಷೋಭೆಯದ್ದೇ ರೂಪಕದಂತೆನ್ನಿಸುತ್ತದೆ.

ಕಥೆಯ ಮೈಕಟ್ಟು ಪ್ರಯೋಗಶೀಲತೆಯಲ್ಲಿ ನಿಕ್ಕಿಯಾದಂತಿದೆ. ಕಥೆಗಾರರೇ ಹೇಳಿಕೊಂಡಿರುವಂತೆ, ನೂರಾರು ಕಥೆಗಳನ್ನು ಹೇಳುತ್ತಿರುವಂತೆ, ಕೇಳಿಸಿಕೊಳ್ಳುತ್ತಿರುವಂತೆ, ಭಾಸವುಂಟುಮಾಡುವ ಕಥೆಯಲ್ಲಿ ದಾಂಪತ್ಯದ ಎಷ್ಟೊಂದು ಮಗ್ಗಲುಗಳ ಕಥೆಗಳು ನೆನಪಾಗಿ, ಚರಿತ್ರೆಯಾಗಿ, ನಾಟಕವಾಗಿ, ಇಲ್ಲೇ ಈಗ ನಡೆಯುತ್ತಿರುವಂಥವಾಗಿ ಕಾಣಿಸುತ್ತವೆ. ಅಶರೀರವಾಣಿಗಳು ವರ್ತಮಾನವನ್ನು ಸೇರಿಕೊಂಡು ಏನನ್ನೋ ವ್ಯಾಖ್ಯಾನಿಸುವುದಕ್ಕೆ

ತುಡಿಯುತ್ತಿರುವಂಥ ಸನ್ನಿವೇಶಗಳು ಘಟಿಸುತ್ತವೆ. ಕಥೆಯೊಳಗೆ ಬರುವ ಸ್ತ್ರೀಯರು ಮತ್ತು ರಾಣೀವಾಸದವರು ಫಳಫಳಿಸುವುದನ್ನು ಕೂಡ ಈ ಹಿನ್ನೆಲೆಯಲ್ಲಿ ನೋಡಬೇಕು. ಕಥೆಯೆನ್ನುವುದು ಇಲ್ಲಿ ಆಗಿಹೋದದ್ದು, ಆಗುತ್ತಿರುವುದು ಮಾತ್ರವಾಗಿರದೆ, ಮುಂದೆ ನಡೆಯಬಹುದಾದದ್ದೂ ಆಗಿದೆ. ನಾಳೆಯ ಕಥೆಯ ಬೀಜವನ್ನು ಗರ್ಭೀಕರಿಸಿಕೊಂಡಿರುವಂಥ ಕಥೆಯೊಂದನ್ನು ಹೀಗೆ ಕಥೆಗಳ ಮೂಲಕ ಸತ್ಯನಾರಾಯಣ ಅವರು ಹೇಳಿದ್ದಾರೆ.

ಹಿಂದೂ ಪುರಾಣಗಳ ಪ್ರಕಾರ ಚಿತ್ರಗುಪ್ತನು ಸಾವಿನ ದೇವರು ಯಮಧರ್ಮನ ಕಾರ್ಯದರ್ಶಿ ಕಂ ಗುಮಾಸ್ತ. ಸಕಲ ಜೀವರಾಶಿಗಳ ಪಾಪ ಪುಣ್ಯಗಳ ಲೆಕ್ಕಾಚಾರ ಆತನ ಬಳಿ ಇರುತ್ತದೆ. ಆತನು ನೀಡುವ ಅಂಕಿಅಂಶಗಳನ್ನು ಆಧರಿಸಿಯೇ ಯಾರು ಸ್ವರ್ಗಕ್ಕೆ ಯಾರು ನರಕಕ್ಕೆ ಎಂದು ನಿರ್ಧಾರವಾಗುವುದು. ಪಾಪ ಪುಣ್ಯಗಳ ಒಟ್ಟು ಮೊತ್ತವೇ ಒಂದು ಜೀವನ. ಒಂದು ವ್ಯಕ್ತಿತ್ವ, ಒಂದು ನಾಣ್ಯದ ಆ ಮುಖ ಈ ಮುಖ. ಕಪ್ಪೂ ಇದೆ ಬೆಳಕೂ ಇದೆ. ಇಂಥ ಬದುಕೇ ಕತೆಗಾರನ ವಸ್ತು. ಹೀಗಾಗಿ ಸತ್ಯನಾರಾಯಣರ ಕತೆಗಳು ಚಿತ್ರಗುಪ್ತನ ಕತೆಗಳಾಗಿವೆ. ಇದೇ ಹೊಳಹಿನೊಂದಿಗೆ ನೋಡಿದಾಗ ಈ ಸಂಕಲನದಲ್ಲಿಯ 'ಬಣ್ಣ ಮತ್ತು ಬಣ್ಣ' ವಿಶೇಷ ಅರ್ಥವನ್ನು ನೀಡುತ್ತದೆ. ಬೆಳಕೆಂದರೆ ಕೇವಲ ಏಳು ಬಣ್ಣಗಳ ಮೊತ್ತವಲ್ಲ, ಅದರಾಚೆಗೂ ಅನಂತ ಸಾಧ್ಯತೆಗಳಿರುತ್ತವೆ ಎಂದು ಬಣ್ಣ ಬಳಿಯುವ ಪುಟ್ಟ ಬಾಲಕಿ ನಿರೂಪಿಸಿದಾಗ ಬದುಕಿನ ಅನಂತ ಸಾಧ್ಯತೆಗಳ ಕಡೆಗೆ ನೋಡುವಂತೆ ಕತೆಗಾರ ಬಲವಂತಪಡಿಸುತ್ತಾರೆ.

ಜಗತ್ತಿನಲ್ಲಿ ಒಳ್ಳೆಯವನು ಕೆಟ್ಟವನು ಎಂಬ ತಾರತಮ್ಯದ ಆಧಾರವೇನು? ಇದಕ್ಕೆ 'ಯಕ್ಷ ಸ್ವಪ್ನ' ಯಲ್ಲಿ ಸಮಾಧಾನವಿದೆ. 'ಜಗತ್ತಿನಲ್ಲಿ ಯಾರೂ ತಾವೇ ತಾವಾಗಿ ಕೆಟ್ಟವರಲ್ಲ ಎಂಬುದು ನಿಜ. ಅಷ್ಟು ಮಾತ್ರಕ್ಕೆ ಯಾರೊಬ್ಬರು ಇಲ್ಲವೇ ಒಬ್ಬ ಒಬ್ಬನು ಕೂಡ ಒಳ್ಳೆಯವನಾಗುವುದಿಲ್ಲ. ಪ್ರಶ್ನೋತ್ತರದ ಸಮಯದಲ್ಲಿ ಧರ್ಮನ ಖಚಿತ, ಆಳವಾದ ಉತ್ತರಗಳಿಂದಾಗಿ ಮನಸ್ಸು ತುಂಬಿ ಈ ಮಾತು ಹೇಳುವುದು ಮರತೇಹೋಯಿತು. ಹಾಗೆ ನೋಡಿದರೆ ಪಾಂಡವರು, ಕೌರವರು ದಾಯಾದಿಗಳಾದರೂ ಈ ಸ್ವಭಾವದಲ್ಲಿ ಸಮಾನರು, ಎಂಬ ಮಾತು ನಮ್ಮ ಸುತ್ತಲನ್ನು ನೋಡುವ ಪರಿಜ್ಞಾನವನ್ನು ಪ್ರಭಾವಿಸದೆ ಇರದು.

ಈ ಹಿನ್ನಲೆಯಲ್ಲಿ ಸೃಜನ ಕ್ರಿಯೆಗೆ ಪ್ರತಿಕ್ರಿಯೆಯ ಹಾಗೆ ಮೂಡಿ ಬಂದ 'ಲೇಖಕನ ರಾಜಿನಾಮೆ' ಕತೆ ವಿಶೇಷವೆಂದು ತೋರುತ್ತದೆ. ಇದರಲ್ಲಿ ಲೇಖಕನೊಬ್ಬನಿಗೆ ಒಂದು ದಿನ

ಇದ್ದಕ್ಕಿದ್ದಂತೆ ಜ್ಞಾನೋದಯವಾಗಿ ತನ್ನ ಎಲ್ಲ ಕೃತಿಗಳನ್ನು ಹಿಂದಕ್ಕೆ ಪಡೆಯುವುದಕ್ಕೆ ನಿರ್ಧರಿಸುತ್ತಾನೆ. ಸಂಬಂಧಿಸಿದವರಿಗೆಲ್ಲ ಪತ್ರ ಬರೆದು ಕೃತಿಯನ್ನು ನನಗೆ ವಾಪಸ್ ಕಳುಹಿಸಿ. ಇವತ್ತಿನ ಬೆಲೆಯಲ್ಲೇ ಕೊಳ್ಳುತ್ತಾನೆ. ಇಷ್ಟೊಂದು ವರ್ಷಾನುಗಟ್ಟಲೇ ಬರೆದೂ ಬರೆದು ಓದುಗರನ್ನ ಹಿಂಸಿಸಿದ್ದಕ್ಕಾಗಿ ಕ್ಷಮೆಯನ್ನು ಕೋರುತ್ತಾನೆ. ನೀಡುವ ಶಿಕ್ಷೆಯನ್ನು ಅನುಭವಿಸಲು ಸಿದ್ಧ ಎಂದು ಹೇಳುತ್ತಾನೆ. ಬಹುಶಃ ಸೃಜನಶೀಲತೆಯನ್ನು ವೃತ್ತಿಯನ್ನಾಗಿ ಮಾಡಿಕೊಂಡವರ, ಅದನ್ನೊಂದು ಆಭರಣವನ್ನಾಗಿ ಮಾಡಿಕೊಂಡವರ ಮಿತ್ತನ್ನು ಭಂಜಿಸುವ ಅಂದಾಜು ಇದು. ಕೃತಿಕಾರನಿಗಿಂತ ಕೃತಿ ದೀರ್ಘಾಯು ಎಂಬ ಭ್ರಮೆಯನ್ನು ಅಳಿಸಿಹಾಕುವ ಒಂದು ನಿಕಷ ಇದು.

ಕೆ.ಸತ್ಯನಾರಾಯಣ ಅವರು 'ದೇವರು ಮತ್ತು ಮಾಧವ ಮೆನನ್' ಕತೆಗೂ ಹಾಗೂ 'ಕಮ್ಯುನಿಸ್ಟ್ ರಾಮಭಟ್ಟರ ಜೋಯಿಸ ಪ್ರೀತಿ' ಕತೆಗೂ ಹೊಂದಾಣಿಕೆಯಾಗುತ್ತಿರುವುದು ಕೂಡ ಕುತೂಹಲಕರ ವಿಷಯ. ಕತೆಯ ಬಗ್ಗೆ ಬರೆಯುವುದಕ್ಕಿಂತ, ಅದರ ಹಿಂದಿರುವ ಮನಸ್ಸಿನ ಬಗ್ಗೆ ಅವರು ಬರೆಯುವುದು ಸೂಕ್ತ. ಯಾಕೆಂದರೆ ದೇವರು–ಅಧ್ಯಾತ್ಮ, ಕೊನೆಗೆ ಏನೋ ಒಂದು, ನಮ್ಮ ಕೈ ಮೀರಿದ್ದು–ವಿಧಿ ಅನ್ನಬೇಕೆ, ಅಥವಾ ದೈವಿಕ ಶಕ್ತಿ ಎನ್ನಬೇಕೆ ಅಥವಾ ಸಮುದಾಯದ ಪ್ರಾರ್ಥನೆ, ಆಸೆ ಹಾರೈಕೆಗಳೆಲ್ಲ ಸೇರಿ ಒತ್ತಡ ಹಾಕಿದ್ದರಿಂದಲೇ ಘಟಿಸಿದ ವಿಚಿತ್ರ ಎನ್ನಬೇಕೆ ಅಥವಾ ವಿವೇಕ ಅಯ್ಯರ್, ಸಾವಿನ ಅನುಪಾತದ ಬಗ್ಗೆ ಹೇಳ್ತಾನಲ್ಲ ಅಂಥ ಒಂದು ಪ್ರಾಕೃತಿಕ ಸಂತುಲನ ಎನ್ನಬೇಕೆ, ಎಂದು ತಲೆಕೆಡಿಸಿಕೊಂಡವರೇ ಎಲ್ಲರೂ. ಲೈಂಗಿಕತೆ ಪಾಪ ಎನ್ನುವ ಭಯವೇ ಇಂಥದ್ದಕ್ಕೆಲ್ಲ ಕಾರಣ. ಈ ಕಾರಣದಿಂದಲೇ ನಾವು ಯೌವ್ವನದಲ್ಲೇ ತಲೆ ಹಾಕಲು ಕಾರಣವಿದ್ದಿರಲೂಬಹುದು ಮತ್ತೆ! ಅಧ್ಯಾತ್ಮ ಯಾವ ಯಾವುದೋ ಪಾತಳಿಯಲ್ಲಿ ನಮ್ಮ ವ್ಯಕ್ತಿತ್ವದ ಒಂದು ಭಾಗವೇ ಆಗಿರುತ್ತದೆ. ಕನಿಷ್ಠ ಭಾರತದ ಈ ಭಾಗದ ಮಟ್ಟಿಗಂತೂ ಇದು ಸತ್ಯವೇ. ಹಾಗಿದ್ದೂ ನಾವು ಕಂಡ ಹತ್ತಿರದವರ ಮತ್ತು ದೂರವಿದ್ದೂ ನಮಗೆ ಹತ್ತಿರವೆನಿಸುವ , ತೀರ ದೂರದವರ ಸಾವುಗಳು ಬಹಳ ವ್ಯತ್ಯಾಸವುಂಟುಮಾಡುವ ಒಂದು ಸಂಗತಿಯಿದು. ದೇವರು ಮತ್ತು ಮಾಧವ ಮೆನನ್ ಕತೆ ತುಂಬ ಆಪ್ತ ವಿವರಗಳಲ್ಲಿ ತೆರೆದುಕೊಳ್ಳುವುದರಿಂದ ಎಲ್ಲೋ ಓದುಗ ತನ್ನನ್ನೇ ಮರೆತು ಕಥಾನಕದ ಲೋಕಕ್ಕೆ ಸೇರಿಹೋದರೂ ಆಶ್ಚರ್ಯವಿಲ್ಲ. ಈ ಕತೆ ನಮ್ಮ ಇಂದಿನ ವಿಸ್ಮೃತಿಯನ್ನೂ ಪ್ರಶ್ನಿಸುವುದರಿಂದ

ಮತ್ತು ಅನೂಹ್ಯವಾದದ್ದುಇದೆ. ಅದನ್ನು ಸರಳವಾದ ಮನಸ್ಸಿನಿಂದ ತಿಳಿಯಬೇಕಾಗಿದೆ ಎನ್ನುವಲ್ಲಿ ಕತೆ (ಸಮಕಾಲೀನ ಸಣ್ಣಕತೆಗಳ ಮಾದರಿಯ ಜೊತೆಗಿಟ್ಟರೂ ಸುಂದರ ಶಿಲ್ಪದಿಂದ ಮತ್ತು ತನ್ನ ಮೊನಚಿನಿಂದ) ಕತೆಯಾಗಿಯೇ ಗೆದ್ದಿದೆ.

*ಕತೆಗಳ ಚೌಕಟ್ಟನ್ನು ಇನ್ನಿತರ ಜತೆ ಸತ್ಯನಾರಾಯಣ ಅವರು ವಿಶಿಷ್ಟ ರೀತಿಯಲ್ಲಿ ಹಿಗ್ಗಲಿಸುವ ಪ್ರಯತ್ನದಲ್ಲಿದ್ದಾರೆ. ಓದುಗರೂ ಲೇಖಕರ ಜತೆಗೆ ಚಿಂತಿಸಲು, ಸಂವಾದಿಸಲು ಉತ್ತೇಜಿಸುವ ಸ್ವಭಾವ ಅವುಗಳದು. ಜಾಗತೀಕರಣ, ಖಾಸಗೀಕರಣ, ವಾಣಿಜ್ಯೀಕರಣದಂಥ ಸಂಗತಿಗಳ ಪ್ರಭಾವವನ್ನು, ಸಾಮಾನ್ಯರ ಬದುಕಿನ ವಿದ್ಯಮಾನಗಳ ಮೂಲಕ ತಿಳಿಸುವ ಪ್ರಯತ್ನವನ್ನೂ ಮೆಚ್ಚಬಹುದಾದರೂ, ಆ ವಿಚಾರಗಳು ಮಿಂಚಿನಂತೆ ಬಂದು ಹೋಗಿಬಿಡುವುದರಿಂದ ನಮಗೆ ಸಮಾಧಾನವಾಗುವುದಿಲ್ಲ.

*ಸಮಕಾಲೀನ ಆತಂಕ, ತಳಮಳ, ಸಮಸ್ಯೆಗಳು ಇಂದಿನವು ಮಾತ್ರವಲ್ಲ ಅವಬುಗಳು ಬೇರೊಂದು ರೂಪದಲ್ಲಿ ಹಿಂದೆಯೂ ಇದ್ದಂಥವೇ ಎಂಬುದು ಅವರ ತಿಳುವಳಿಕೆಯಾಗಿರುವಂತಿದೆ. ಭೂತ–ವರ್ತಮಾನಗಳು ಒಂದಕ್ಕೊಂದು ಪೂರಕವಾಗಿವೆ ಎಂಬಂತೆ ನೋಡುವುದನ್ನು ಆಕ್ಷೇಪಿಸಬೇಕಿಲ್ಲ. ಭೂತದ ಹಂಗು ಹರಿದುಕೊಂಡು ವರ್ತಮಾನವಿರಲು ಸಾಧ್ಯವಿಲ್ಲ ಸರಿಯೇ. ಈ ರೀತಿಯ ಸಾತತ್ಯದ ಬಲಪಂಥೀಯರು ತಮ್ಮ ವಿಚಾರಕ್ಕೆ ಸಮರ್ಥನೆ ಎಂದು ಭಾವಿಸಬಹುದು. ಆದರೆ ಪರಂಪರೆಯನ್ನು ವಿಮರ್ಶಿಸದೆ ಒಪ್ಪಿಕೊಳ್ಳದಿರುವ ಅವರ ರೀತಿಯನ್ನು ಲಕ್ಷಿಸಬೇಕಾಗುತ್ತದೆ. ಅದನ್ನು ಹೊಸ–ಹೊಸತೆನ್ನುವಂತೆ ದುಡಿಸಿಕೊಳ್ಳಲು ನೋಡುತ್ತಿರುವುದರಿಂದ ಅವು ತಾಜಾ ಆಗಿ ಕಾಣಿಸಿಕೊಳ್ಳುವಲ್ಲಿ ಯಶಸ್ವಿಯಾಗಿವೆ.

*ಉದಯವಾಣಿಯಲ್ಲಿ ಪ್ರಕಟಿತವಾದ ಲೇಖನಗಳ ಪರಾಮರ್ಶನ ಮಾಡಲಾಗಿದೆ.

# ಅಧ್ಯಾಯ-೬

## ಭವಿಷ್ಯದ ಬದುಕಿನ ರೂಪಣ ದೃಷ್ಟಿ

ನಾವೆಲ್ಲರೂ ಮನುಷ್ಯರಾಗಿಯೂ, ಸಮುದಾಯಗಳಾಗಿಯೂ ನಿರ್ದಿಷ್ಟ ಸ್ಥಳವೊಂದರಲ್ಲಿ ವಾಸಿಸುತ್ತೇವೆ. ಈ ಸ್ಥಳಕ್ಕೆ ಮಾನಸಿಕ ಮತ್ತು ಭೌತಿಕ ಆಯಾಮಗಳಿರುತ್ತವೆ. ನೆರೆಹೊರೆ, ಬಂಧು-ಬಳಗ, ವೃತ್ತಿ-ವ್ಯಾಪಾರ, ಸಾಸ್ಕೃತಿಕ-ದೈವಿಕ ಚಟುವಟಿಕೆಗಳು, ಸ್ಮೃತಿ, ಎಲ್ಲವೂ ಸೇರಿಕೊಂಡು ಈ "ಸ್ಥಳ" ನಿರ್ಮಾಣವಾಗಿರುತ್ತದೆ. ನಮ್ಮಲ್ಲಿರುವ 'ಸ್ಥಳವಂದಿಗ' ರೆಂಬ ಕಲ್ಪನೆಯ ಹಿಂದಿರುವುದು ಈ ಮನೋಭಾವವೇ. ಈ 'ಸ್ಥಳ'ವೆಂಬ ಕಲ್ಪನೆ, ಭಾವನೆ ಹುಟ್ಟಲು ಶತಮಾನಗಳೇ ಬೇಕಾಗುತ್ತದೆ. ಒಮ್ಮೊಮ್ಮೆ ಹುಟ್ಟಲೂ ಹೋಗದೆ ಹೋಗಬಹುದು? ದಲಿತರ ಉದಾಹರಣೆಯನ್ನೇ ತೆಗೆದುಕೊಂಡರೆ ನೂರಾರು ವರ್ಷಗಳಿಂದ ಸಮುದಾಯವಾಗಿ ಒಂದೇ ಸ್ಥಳದಲ್ಲಿದ್ದರೂ ಗ್ರಾಮೀಣ ಚೌಕಟ್ಟಿನಲ್ಲಿ ಸಿಗದೇ ಹೋದ ಸ್ವಾತಂತ್ರ್ಯ- ಸಮಾನತೆಯಿಂದಾಗಿ ಅವರಿಗೆ ಸಾಂಪ್ರದಾಯಿಕವಾಗಿ ಸಿಕ್ಕಿದ ಸ್ಥಳದ ಬಗ್ಗೆ ಒಲವಿಲ್ಲ. ಹೊಸಹೊಸ ಸ್ಥಳಗಳನ್ನು ಮಾನಸಿಕವಾಗಿ, ಭೌತಿಕವಾಗಿ ಸದಾ ಹುಡುಕಲು, ಸ್ಥಾಪಿಸಲು ದಲಿತವರ್ಗದಿಂದ ಪ್ರಯತ್ನ ಮುಂದುವರಿದೇ ಇದೆ.

ಸತ್ಯನಾರಾಯಣ ಅವರ ಎಲ್ಲ ಕತೆಗಳು ಓದುಗರಿಗೆ ಇಷ್ಟವಾಗುವಂಥವು. ಕೆಲವೇ ಕೆಲವು ಕತೆಗಳಲ್ಲಿ ಈ ಶೈಲಿಗೆ ಒಗ್ಗದ ವಸ್ತು-ಹರಹು ಇದ್ದು ಅವುಗಳನ್ನು ಈ ಸಂಕಲನದಲ್ಲಿ ಸೇರಿಸದೇ ಇದ್ದಿದ್ದರೆ ಒಳ್ಳೆಯದಿತ್ತು ಎಂದೂ ಅನಿಸುತ್ತದೆ. 'ಅಮೇರಿಕಾದಲ್ಲಿ ಸಂಶೋಧನೆ, 'ಅಮೇರಿಕಾದಲ್ಲಿ ಸೀಸದ ಕಡ್ಡಿ', 'ತಿಥಿಗೆ ರಾಜಿನಾಮೆ', 'ಯಕ್ಷ ಸ್ವಪ್ನನೆ, 'ಸೂರ್ಯೋದಯ', 'ಸರ್.ಎಂ.ವಿ. ಕೊನೆಯ ಬಯಕೆ' ಮತ್ತು 'ಸರ್.ಎಂ.ವಿ ಮತ್ತು ರಂಗಭೂಮಿ' ಕತೆಗಳು ಮನಸ್ಸು-ಬುದ್ಧಿಯಲ್ಲಿ ತೀರ ಹೊಸದಾದ ಸಂವೇದನೆಗಳನ್ನು ಮೂಡಿಸುವುದಿಲ್ಲ. 'ತಿಥಿಗೆ ರಾಜಿನಾಮೆ ಕತೆ' ಸಶಕ್ತವಾಗಿದ್ದೂ ಅದರ ಬಂಧ ಕೊಂಚ ಸಡಿಲವಾಗಿದ್ದು, ವಿಳಂಬಿತ ಗತಿಯಲ್ಲಿರುವುದರಿಂದ ಉಳಿದ ಕತೆಗಳಿಗೆ ಹೋಲಿಸಿದಲ್ಲಿ ಅಷ್ಟೇನೂ ಪರಿಣಾಮಕಾರಿಯಾಗಿಲ್ಲ. ಈ ಕತೆಗಳು ಉಳಿದ ಕತೆಗಳಂತೆ ಅನೂಹ್ಯವಾದ ವ್ಯಾಪ್ತಿಯನ್ನು ಹೊಂದಿಲ್ಲದಿರಬಹುದು. ವಿಶೇಷ ಹೊಳಹುಗಳನ್ನು ಕಾಣಿಸುವಷ್ಟು ಅರ್ಥಗರ್ಭಿತವಲ್ಲದಿರಬಹುದು, ಮತ್ತು ಅಂಥ

ಅನುರಣನ ಶಕ್ತಿಯನ್ನು ಹೊಂದಿಲ್ಲದಿರಬಹುದು, ಅಥವಾ ಅದಕ್ಕೆ ಸ್ಪಂದಿಸುವುದು ಓದುಗರಿಗೆ ಸಾಧ್ಯವಾಗದೇ ಹೋಗಿರಬಹುದು. ಆದರೆ ಓದುಗರ ಸಾಮರ್ಥ್ಯ ಕನಿಷ್ಠಮಟ್ಟದಲ್ಲಿರುವಾಗಲೇ ಅದು ದಕ್ಕಬೇಕಿರುವುದು ಮುಖ್ಯ. ಓದುಗನೇನೂ ಕತೆಗಳಿಂದ ತಿಣಿಕಾಡಿ ಪಡೆಯುವಂತಿರಬಾರದು. ಎಂಬ ನಿಲುವು ನನ್ನದಾಗಿರುವುದರಿಂದ ಇವತ್ತು ನಾವುಗಳೆಲ್ಲ ವಿಭಿನ್ನ ಪರಿಸ್ಥಿತಿಯಲ್ಲಿ, ಧಾವಂತದಲ್ಲಿ, ಕದ್ದುಮುಚ್ಚಿ, ಅರೆಬರೆಯಾಗಿ ಓದಿಕೊಂಡರೂ ಕತೆ ನಮಗೆ ದಕ್ಕುವಂತಿರಬೇಕಾದುದು ಬಹಳ ಮುಖ್ಯ!

ಭಾಷೆ ಮತ್ತು ನಗು, ಕತೆಯಲ್ಲಿ ಅತ್ಯಂತ ಸೂಕ್ಷ್ಮವಾದೊಂದು ಮುಜುಗರ, ಪಾರಂಪರಿಕವಾಗಿ ನಡೆದುಬಂದಿರುವುದರೊಂದಿಗೆ, ಏನು ಮಾಡಿದರೂ ತತ್‌ಕ್ಷಣಕ್ಕೆ ಹೊಂದಿಕೊಳ್ಳಲು ಸಾಧ್ಯವೇ ಇಲ್ಲದ ಬೆಳವಣಿಗೆಯೊಂದನ್ನು ಒಪ್ಪಿಕೊಳ್ಳಲಾರದ, ಸ್ವೀಕರಿಸಲಾರದ, ಸಹಿಸಲಾರದ ಅಸಹನೆಯ ಸ್ಫೋಟವಿದೆ. ಇದು ದಲಿತ–ಬ್ರಾಹ್ಮಣ, ಉಳ್ಳವರು–ಇಲ್ಲದವರು ಮುಂತಾಗಿ ನಾವು ಕಟ್ಟಬಹುದಾದ ವರ್ಗಸಂಘರ್ಷವೋ, ಶೋಷಣೆಯೋ, ಪಕ್ಷಪಾತದ ನಿಲುವೋ ಅಲ್ಲ ಎನಿಸುವಾಗಲೂ ಅದರ ಬೀಜಗಳನ್ನೆಲ್ಲ ತನ್ನೊಳಗೆ ಇರಿಸಿಕೊಂಡಿರುವಂಥ ಸಂಗತಿಯೇ. ಆದರೆ ಗಟ್ಟಿಯಾಗಿ ಇದು ಹೀಗೆಯೇ ಎಂದು ಹೇಳತೊಡಗಿದೊಡನೆ ಎಲ್ಲ ಕುಸಿದು ಬೀಳುವಂಥ, ಭಾವನಾತ್ಮಕವಾದ, ಸಂವೇದನೆಗಳ ಮಟ್ಟದ ಶಿಲ್ಪದಲ್ಲಷ್ಟೇ ಅವೆಲ್ಲದರ ಬೀಜಗಳಿಗೆ. ವ್ಯಕ್ತಿ ಮಾಗುವ ಹಂತ ಅಥವಾ ಸಮಾಜ ಕೆಟ್ಟು ನಾರುವ ಹಂತ ಎರಡೂ ತೊಡಗುವ ಒಂದು ಬಿಂದುವಿನ ಚಿತ್ರಣ ಇಲ್ಲಿದೆ.

ನಾವು ಬಲ್ಲ ನೋಟ ಕೂಡ ಸರಳವಾಗಿದ್ದೂ ಗಹನವಾದ ಒಂದು ಸಂಗತಿಯನ್ನು, ಅದು ಇದೇ ಎಂದು ಹೇಳಲಾಗದ ಪರಿಯಲ್ಲಿ ನಮ್ಮ ಅಂತರಂಗದಲ್ಲಿ ಕಲಕುವ ಶಕ್ತಿಯನ್ನು ಪಡೆದಿರುವ ಕತೆ. ಸಾಯುವ ಕೆಲ ಸಮಯ ಮುಂಚೆ ಮನುಷ್ಯನ ಮನಸ್ಸು ಬಾಲ್ಯವನ್ನು ನೆನಪಿಸಿಕೊಳ್ಳುತ್ತೆ, ಹಂಬಲಿಸುತ್ತೆ ಎನ್ನುವ ಒಂದು ಆಡು ಮಾತನ್ನೇ ಹಿಡಿದು ಸಾಗುವ ಕತೆ ಬದುಕಿನ ಒಂದು ಕ್ಷಿಪ್ರನೋಟವನ್ನು ನೀಡುತ್ತಲೇ ವಾಸ್ತವದ ಕಟು ದೈನಂದಿನದ ಎದುರು ಸಾವು–ಬದುಕು, ಅದರ ಕಾರ್ಪಣ್ಯ ಎಲ್ಲವನ್ನು ಚಿತ್ ಮಾಡುತ್ತ ಹೋಗುತ್ತದೆ. ಯಾರು ಸತ್ತರೂ, ಯಾರು ಬದುಕಿದರೂ ತನ್ನ ಪಾಡಿಗೆ ತಾನು ಓಡುತ್ತಿರುವ ದಿನಮಾನದಲ್ಲಿ ಅದೊಂದು ಗಂಭೀರ ವಿದ್ಯಮಾನವೇ ಅಲ್ಲ ಎಂಬಂತೆ ಸಾಗುವ ಬಗೆ ನಮಗೆ ಗೊತ್ತು. ಪಕ್ಕದ

ಮದುವೆ ಹಾಲ್ನಲ್ಲಿ ಸಂಭ್ರಮದ ಗದ್ದಲ ಇರುವಾಗಲೇ, ಇತ್ತ ಸಾವಿನ ಸುದ್ದಿ, ಶವಸಂಸ್ಕಾರದ ಗಡಿಬಿಡಿ ಇರುವುದು ವಿಶೇಷವೇನಲ್ಲ. ಆಗಲೂ ಇದೆಲ್ಲ ನನ್ನ ಜಗತ್ತು ಎಂದು ಸುಮ್ಮನೆ ತ್ಯಜಿಸಲಾಗದು ನಮಗೆ. ನಮ್ಮ ಅದೇ ಜಗತ್ತಿನೆದುರು ನಮ್ಮ ನಮ್ಮ ವೈಯುಕ್ತಿಕ ಬದುಕಿನ ಮಹತ್ವದ ಸಂಗತಿಗಳು, ಸಾವು-ನೋವು-ವಿಯೋಗ-ನೆನಪು-ಕಷ್ಟನಷ್ಟಗಳೆಲ್ಲ ಕೇವಲ ಅಂತರಂಗದಲ್ಲಷ್ಟೇ ಕಾಡುತ್ತ, ಯಾವುದಕ್ಕೋ ಹಂಬಲಿಸುತ್ತ, ನೋನುತ್ತ ಉಳಿಯುವ ಘಳಿಗೆಯ ದಿವ್ಯವನ್ನು ಛಕ್ ಎಂದು ಹೊಳೆಯಿಸಿ ಮರೆಯಿಸುವಂತೆ ಇಲ್ಲಿನ ಕತೆಗಳಿವೆ.

ಸತ್ಯನಾರಾಯಣ ಅವರ ಕತೆಗಳಲ್ಲಿ ಕಂಡು ಕೇಳದ ಶಬ್ದ ಇಲ್ಲಿನ ಮತ್ತೊಂದು ಮುಖ್ಯ ಕತೆ. ಇಲ್ಲಿ ಫ್ಯಾಂಟಸಿ ಇದೆ, ಭ್ರಮೆಯನ್ನು ವಾಸ್ತವದೊಂದಿಗೆ ಮೇಳೈಸಿ ಹೇಳುವ ವಿಧಾನದ ಬಳಕೆಯಾಗಿದೆ. ಆದರೆ ಕೊನೆಗೆ ಇದ್ಯಾವುದೂ ಮುಖ್ಯವೆನಿಸದೆ, ತರ್ಕದ ಅಗತ್ಯವೇ ಇಲ್ಲದೆ ನೇರ ಅಂತರಾತ್ಮಕ್ಕೆ ಲಗ್ಗೆಯಿಡುವ ವಸ್ತು ಇಲ್ಲಿನದು. ಸಾವು ಮತ್ತು ಸತ್ತ ವ್ಯಕ್ತಿಯೊಂದಿಗಿನ ಮುಖಾಮುಖಿಯಂಥ ಒಂದು ಪರಿಕಲ್ಪನೆಯೇನಿದೆ, ತೀರ ಆತ್ಮೀಯ ವ್ಯಕ್ತಿಯೊಬ್ಬರನ್ನು ಇದೀಗ ಕಳೆದುಕೊಂಡು ನೊಂದ ಮನಸ್ಸು ಅಥವಾ ಕಳೆದುಕೊಳ್ಳಬೇಕಾದೀತು ಎಂಬ ಆತಂಕದಲ್ಲಿ ನೊಂದ ಮನಸ್ಸು ಅಥವಾ ಹಿಂದೆಂದೋ ಕಳೆದುಕೊಂಡು ನೆನಪುಗಳಲ್ಲಿ ಆ ವ್ಯಕ್ತಿ ಜೀವಂತಗೊಂಡು ನಮ್ಮ ಸಂವೇದನೆಗಳನ್ನು ಜಾಗೃತಗೊಳಿಸಿದ್ದರಿಂದಲೇ ಹುಟ್ಟಿದ ನೋವು-ಇವುಗಳನ್ನು ಎಲ್ಲರೂ ಅನುಭವಿಸಿಯೇ ಇರುತ್ತಾರೆ. ಮನುಷ್ಯ ಬದುಕುವುದೇ ನೆನಪುಗಳಲ್ಲಿ. ವಿಯೋಗ, ವಿರಹ, ವಿರಸ, ಮತ್ತು ಸಾವು ಕಠೋರವಾಗುವುದು ನಾವು ಪ್ರಸ್ತುತ ಗೈರಿನಲ್ಲಿರುವ ವ್ಯಕ್ತಿಯೊಂದಿಗೆ ಪೂರ್ತಿಗೊಳಿಸದೇ ಬಿಟ್ಟ ಕೆಲವು ಸಂಗತಿಗಳನ್ನು ನೆನೆದು. ಆ ಸಂಬಂಧಗಳಲ್ಲಿ ಏನೋ ಒಂದಿಷ್ಟು ಉಳಿದು ಹೋಗಿದೆ ಮತ್ತು ಕೇವಲ ನಾವು ಮಾತ್ರ ಇಲ್ಲಿ ಉಳಿದುಹೋಗಿದ್ದೇವೆ, ಅದನ್ನು ಪೂರ್ತಿಗೊಳಿಸಲು ಅಗತ್ಯವಾದ ಆ ಇನ್ನೊಂದು ವ್ಯಕ್ತಿ ಇನ್ನಿಲ್ಲವಾಗಿದೆ. ಇದು ಒಂದು ಹೊಸ ಸಂಕಟಕ್ಕೆ ಕಾರಣವಾಗಿದೆ ಮತ್ತು ಅದು ನಾವಿರುವಷ್ಟೂ ಕಾಲ ಹಾಗೆಯೇ ಉಳಿದು ಹೋಗುವ, ನಿರಂತರ ಕಾಡುವ ಪುತ್ರಶೋಕದಂತಿದೆ. ಇದು ಇಲ್ಲಿನ ಹಲವಾರು ಕತೆಗಳ ಏಕಸೂತ್ರ, ಆದರೆ ಈ ಏಕಸೂತ್ರ ಕಾಣಿಸುವ ಸತ್ಯಗಳು ಮಾತ್ರ ವಿಭಿನ್ನ, ವಿಶಿಷ್ಟ ಮತ್ತು ಸಂವೇದನೆಗಳಲ್ಲಷ್ಟೇ ಸ್ಪಷ್ಟವಾಗುವ, ಮಾತಿಗೆ ನಿಲುಕದ ಕಲಕುವಿಕೆಯಲ್ಲಿ

ಗ್ರಹಿಕೆಗೆ ದಕ್ಕುವಂಥಾದ್ದು. ಹೀಗೆ ಈ ಎಲ್ಲ ಕತೆಗಳೂ ಎಲ್ಲೋ ಯಾವುದೋ ವಿಷಯದಲ್ಲಿ ನಮ್ಮ ಅಂತರಂಗದ ಕಣ್ತೆರೆಸುವ ಮೆಲುದನಿಯ ಮಾತುಗಳನ್ನಾಡುತ್ತಿವೆ.

ಜೀವಾವದಿ ಶಿಕ್ಷೆ, ಸ್ವಾಮಿ ಮತ್ತು ನಾಯಿ, ಮುಟ್ಟು, ಯಕ್ಷಪ್ರಶ್ನೆ, ೧೨-೦೫-೧೯೬೨, ದಾಟದ ಮೂರು ಕತೆಗಳು ಬೇರೆ ಹಲವು ಆಯಾಮಗಳನ್ನು ಹೊಂದಿವೆಯಾದರೂ ಮೂಲಭೂತವಾಗಿ ಸಾವು. ಅದರ ಅಮೂರ್ತ ಸಂಬಂಧವೊಂದು ನಮ್ಮ ಬದುಕಿನೊಂದಿಗೆ ಸಾವಿನ ನಂತರವೂ ಬಿಗಿದುಕೊಂಡೇ ಇರುವುದನ್ನು ಕಾಣಿಸುವ ವಿಶಿಷ್ಟ ಬಗೆಯಿಂದ ಮುಖ್ಯವಾಗುತ್ತವೆ. ಇಲ್ಲಿನ ಒಂದೊಂದು ಕತೆಗಳು ಹಲವು ಬಗೆಯಲ್ಲಿ ಕಾಡುವ ಕಸುವುಳ್ಳ ಮಹತ್ವದ ಕತೆಗಳು. ನಮ್ಮ ಭೂತಕಾಲದ ದೈನಂದಿನ, ಕಳೆದ ದಿನಗಳ ಬದುಕು ಕೂಡ ಸತ್ತ ವ್ಯಕ್ತಿಯಂತೆಯೇ, ಅಷ್ಟೇ ಮಟ್ಟಿಗೆ ನೆನಪು. ಆ ನೆನಪು ಒಂದು ಅಸಹಾಯಕತೆಯನ್ನು ಹುಟ್ಟು ಹಾಕುತ್ತಿರುತ್ತದೆ. ಬೇರೆ ಬೇರೆ ಬಗೆಯಲ್ಲಿ. ಸತ್ತ ವ್ಯಕ್ತಿಗೆ ಹೇಗೆ ಬಿಡುಗಡೆಯಿಲ್ಲವೋ ಹಾಗೆಯೇ ಬದುಕಿರುವ ವ್ಯಕ್ತಿಗೂ ಸದ್ಯ ಬಿಡುಗಡೆಯಿಲ್ಲ. ಒಂದು ನೆನಪಾಗಿ ಕಾಡುತ್ತದೆ. ಇನ್ನೊಂದರ ಸತ್ತ ಜೀವಂತಿಕೆಯನ್ನು ನೆನೆನೆನೆದು. ಈ ಪ್ರಕ್ರಿಯೆ ಎಲ್ಲರ ಬದುಕಿನಲ್ಲೂ ಬರುವಂಥದ್ದೇ. ಈ ಕಾಡುವಿಕೆಯಲ್ಲೇ ಬದುಕಿನ ಮರ್ಮವನ್ನು ಒಂದು ಹೊಳಹಿನಲ್ಲೆಂಬಂತೆ ಕಾಣಿಸುವ ಪ್ರಯತ್ನ ಇಲ್ಲಿದೆ. ಮುಟ್ಟು ಕತೆಯಲ್ಲಿ ನೇರವಾಗಿ ಸಾವು ತನ್ನ ನೆರಳು ಚಾಚಿಲ್ಲವಾದರೂ ಸೂಕ್ಷ್ಮವಾಗಿ ಗಮನಿಸಿದರೆ ಕಮಿಷನರ್ ಕೃಷ್ಣಪ್ಪ ಮತ್ತು ಸಾವಿತ್ರಮ್ಮ ಸಾಕಿದ ಮಗು ಒಂದೆಯೇ ? ಹೌದು ಎಂದಾದರೆ ಕೃಷ್ಣಪ್ಪನದು ಸದ್ಯ ಮರುಜನ್ಮವೇ ಸರಿ. ಇಲ್ಲಿರುವುದು ಕಮಿಷನರ್ ಕೃಷ್ಣಪ್ಪನ "ಸತ್ತ ಭೂತವನ್ನು ಹದ್ದಿನಂದದಿ ತಂದು ಅವನ ಮನೆಯಂಗಳದಿ ಹಾಕುತ್ತಿರುವ" ಸಾವಿತ್ರಮ್ಮ ಎಂಬ ವರ್ತಮಾನ. ಮುಟ್ಟು ಎನ್ನುವುದು ಇಲ್ಲಿ ಕ್ರಿಯಾಪದವಾಗಿ ಲಂಕೇಶರ "ಮುಟ್ಟಿಸಿಕೊಂಡವನು" ಕತೆಯ ನೆನಪು ತರುವಂತಿದೆ.

'ಹೊಸ ಉದ್ಯೋಗ' ಎಂಬ ಕತೆಯಲ್ಲಿಯೂ ಅದೇ ಸಾವು. ಜೀವನ ಪ್ರೀತಿಯ ಬಗ್ಗೆ ಮತ್ತು ಜೀವ ಜೀವದ ನಡುವಿನ ಸಂಬಂಧದ ಬಗ್ಗೆ ಎನ್ನುವುದು ಬಹುಮುಖ್ಯವಾದ ಸಂಗತಿ. ಇಲ್ಲೆಲ್ಲ ಸತ್ಯನಾರಾಯಣ ಅವರು ತಣ್ಣಗಿನ ಧ್ವನಿಯಲ್ಲಿ ಕತೆ ಹೇಳುತ್ತಿರುವುದು ತುಂಬ ಇಷ್ಟವಾಗುತ್ತದೆ. ಇದೇ ಸಾಲಿಗೆ ಸೇರುವ ಇನ್ನೊಂದು ಕತೆ 'ಬಣ್ಣ ಮತ್ತು ಬಣ್ಣ'

ಸತ್ಯನಾರಾಯಣ ಅವರ 'ಅಮೇರಿಕಾದಲ್ಲಿ ಸಂಶೋಧನೆ' ಕತೆಯ ತಿರುಳು ನನಗೆ ಅಷ್ಟೇನೂ ಒಗ್ಗಲಿಲ್ಲ. ಒಂದು ನಿರ್ದಿಷ್ಟ ಜೀವನಶೈಲಿಯನ್ನು ರೂಢಿಸಿಕೊಂಡಿರುವಂಥ ಸಂಸ್ಕೃತಿಯಲ್ಲಿ ಲೈಂಗಿಕತೆ ಮಹತ್ವ ಪಡೆಯುತ್ತಿದೆ ಎನ್ನುವುದೇ ಒಂದು ಅಬ್ಸರ್ವೇಶನ್ ಎಂದು ತಿಳಿಯುವ ಸ್ಥಿತಿ. ಆ ಬಗ್ಗೆ ವಿಶ್ಲೇಷಣೆ, ಅಧ್ಯಯನ ಅಗತ್ಯ ಎಂದು ತಿಳಿಯಬೇಕಾದಂಥ ಪರಿಸ್ಥಿತಿ ಇದೆ ಅಥವಾ ಒದಗಬಹುದು ಎನ್ನುವುದನ್ನು ಯಾಕೋ ನನ್ನ ಮನಸ್ಸು ಒಪ್ಪುತ್ತಿಲ್ಲ. ಒಂದೆಡೆ ರೇಪು, ಲೈಂಗಿಕತೆಯ ವಿಜೃಂಭಣೆ ಎಲ್ಲ ಇರುವಂತೆಯೇ ಮದುವೆಯಿಂದ ವಿಮುಖರಾಗುತ್ತಿರುವ, ಲೈಂಗಿಕ ಆಸಕ್ತಿಯನ್ನೂ ಕಳೆದುಕೊಳ್ಳುತ್ತಿರುವ, ಸಲಿಂಗಕಾಮದಲ್ಲಿ ಹೆಚ್ಚು ಆಸಕ್ತರಾಗುತ್ತಿರುವ ಯುವ ಜನಾಂಗ ಕೂಡ ನಮ್ಮ ವರ್ತಮಾನವಾಗಿದೆ ಎನಿಸುತ್ತದೆ. ಇವತ್ತಿನ ಈ ಲೈಂಗಿಕ ಅತಿರೇಕದಲ್ಲಿ ಕಾಣುತ್ತಿರುವುದು ಕೂಡ ಕ್ರೌರ್ಯ ಮತ್ತು ಹಿಂಸೆಯೇ ಹೊರತು ಕಾಮುಕತೆಯಲ್ಲ ಎನಿಸುತ್ತದೆ. ಅದೇನಿದ್ದರೂ ಕತೆಯ ನಿರೂಪಣೆಗೆ ಹೊಸ ಶೈಲಿ ಅತ್ಯಂತ ಸೂಕ್ತವಾಗಿದೆ ಅಥವಾ ಅದನ್ನು ಸೂಕ್ತವಾಗಿ ಬಳಸಿಕೊಳ್ಳಲಾಗಿದೆ ಎನ್ನುವುದು ನಿಜ.

'ತಿಥಿಗೆ ರಾಜಿನಾಮೆ' ಕತೆಯಲ್ಲಿ ಆಯ್ದುಕೊಂಡ ಪ್ರಶ್ನೆಯೂ ಗಂಭೀರವಾದುದೇ ಆಗಿದ್ದರೂ ಅದರ ನಿರ್ವಹಣೆ ಅಷ್ಟೊಂದು ಹರಿತವಾಗಿ ಬಂದಿಲ್ಲ ಎನಿಸುತ್ತದೆ. 'ಯಕ್ಷ ಸ್ವಪ್ನ' ಮತ್ತು 'ಸೂರ್ಯೋದಯ' ಕತೆ ಕೂಡ ಹೇಳಬೇಕಾದ್ದನ್ನು ತೀರ ಸರಳಗೊಳಿಸಿಕೊಂಡಿದೆ. ಇವು ಹಲವು ಆಯಾಮಗಳ ನೆಲೆಯನ್ನು ಬಿಟ್ಟುಕೊಟ್ಟು ಯಾವುದೋ ಒಂದು ಪ್ರಶ್ನೆ, ವೈಚಾರಿಕ ತರ್ಕ ಅಥವಾ ವೈಶಿಷ್ಟ್ಯವನ್ನೇ ಕೇಂದ್ರವಾಗಿರಿಸಿಕೊಂಡ ಕತೆಗಳಾಗಿವೆ.

ಉಳಿದಂತೆ ಒಟ್ಟಾರೆಯಾಗಿ ಸತ್ಯನಾರಾಯಣ ಅವರ ಕತೆಗಳ ಓದು ಏನನ್ನು ಕೊಡುತ್ತದೆ ಎಂದು ನೋಡಬೇಕು. ಜನಜೀವನ ಸರಳವಾಗಿ ಮನುಷ್ಯ ಸಂಬಂಧದಲ್ಲಿ, ಬದುಕಿನಲ್ಲಿ ರುಚಿ ಕಳೆದುಕೊಂಡು, ಅನ್ಯಮನಸ್ಕವಾಗಿರುವುದನ್ನು ತುಂಬ ಕಲಾತ್ಮಕ ಜಾಣ್ಮೆಯಿಂದ ನಿರೂಪಿಸುವ, ಸೂಕ್ಷ್ಮವಾದ ವಸ್ತುವನ್ನು ಭಾಷೆಯಲ್ಲಿ ನಿಜವಾಗಿಸುವ ತನ್ನ ಕಾವ್ಯಾತ್ಮಕ ಉದ್ದೇಶದಲ್ಲಿ ಕತೆಗಳು ಸಂಪೂರ್ಣವಾಗಿ ಸಫಲವಾಗಿವೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ ಅದು ಇದೆಲ್ಲದರಿಂದ ಓದುಗರ ಮನಸ್ಸಿನ ಮೇಲೆ ಉಂಟು ಮಾಡುವ ಪರಿಣಾಮವೇನು ಎನ್ನುವುದು ಪ್ರಶ್ನೆ.

ಕತೆಗಾರ ಬದುಕನ್ನು ನೋಡುವ ಬಗೆಯ ಕುರಿತೇ ಇಲ್ಲಿ ಅನುಮಾನ ಹುಟ್ಟಿಸುತ್ತಾರೆ ಸತ್ಯನಾರಾಯಣ. ಯಾವುದಾದರೂ ಒಂದು ಘಟನೆ, ಒಂದು ಸಂದರ್ಭನ ಕತೆ ಬರೆಯೋರು ನಾಲ್ಕು ಜನ ಲೇಖಕರು ಕೇಳಿಸಿಕೊಂಡರೆ, ಅವರು ಕೇಳಿಸಿಕೊಂಡ ಕತೆಗಿಂತ, ಅವರಿಗೆಲ್ಲ ಅದು ತಮ್ಮ ಮನಸ್ಸಿನಲ್ಲಿ ಹೇಗೆ ಬೆಳೆಯುತ್ತೆ ಅನ್ನೋದೆ ಮುಖ್ಯವಾಗುತ್ತೆ. ಪ್ರತಿಯೊಬ್ಬ ಲೇಖಕನಿಗೂ ವಸ್ತು, ಪಾತ್ರಗಳು, ಸಂದರ್ಭ ತನ್ನ ಮನಸ್ಸಿನೊಳಗೆ ಬೆಳೆಯುತ್ತಿರುವ, ಮಾಗುತ್ತಿರುವ ಕ್ರಮವೇ ಸರ್ವಶ್ರೇಷ್ಠವಾದುದ್ದು ಅನ್ನುವ ಭಾವನೆ, ಅಹಂಕಾರ ಇರುತ್ತೆ. ಜಗತ್ತಿನಲ್ಲಿ ಕಷ್ಟಕ್ಕಿಂತಲೂ, ಬರಹಗಾರನಿಗೆ, ಅರ್ಥವಾದಷ್ಟೇ ಕಷ್ಟ. ಅವನು ಕಂಡಷ್ಟೇ ಕಷ್ಟ ಮುಖ್ಯವಾಗುತ್ತದೆ. ಅಷ್ಟೇ ಅಲ್ಲ, ಹಾಗೆ ಕಷ್ಟ ಪಡುವವರು ಅನುಭವಿಸುವ ನೋವಿಗಿಂತಲೂ ತನ್ನ ಬರವಣಿಗೆಯಲ್ಲಿ ಅಭಿವ್ಯಕ್ತವಾಗುವ ಕಷ್ಟ, ನೋವೆ ದೊಡ್ಡದು ಅಂತ ಕೂಡ ಬರಹಗಾರ ನಂಬುತಾನೆ, ಭ್ರಮಿಸುತ್ತಾನೆ.

ಒಂದು ವಿಚಾರ, ವ್ಯಕ್ತಿಗಳನ್ನು ಒಂದು ಕಾಲ ದೇಶದ ನೆಲೆಯಲ್ಲಿ ಪರಿಶೀಲಿಸುತ್ತಲೇ, ಅವುಗಳನ್ನು ಕಾಲದೇಶಾತೀತವಾಗಿಸುವ, 'ಜಯಮ್ಮ-ನಾಗಮ್ಮ' ಮತ್ತು 'ಕೆಟ್ಟವರ ಒಳ್ಳೆಯ ಪ್ರಭಾವ'ದಂಥವು ನಮ್ಮನ್ನು ತಟ್ಟುತ್ತವೆ. ಈ ದೃಷ್ಟಿಯಿಂದ ತನ್ನ ಮಿತವಾದ ಅವಕಾಶದಲ್ಲೂ ಒಂದು ವಿಚಾರ, ಗ್ರಹಿಕೆಯನ್ನು ತಮ್ಮ ಖಾಸಾ ಅನುಭವಗಳ ವಿಶ್ಲೇಷಣೆಯ ಮೂಲಕ, ಅದಕ್ಕೆ ತಕ್ಕದಾದ ಆಕೃತಿಯೊಂದನ್ನು ಅನ್ವೇಷಿಸಿಕೊಳ್ಳುವ ಪ್ರಕ್ರಿಯೆಯಲ್ಲಿ 'ಕೆಟ್ಟವರ ಒಳ್ಳೆಯ ಪ್ರಭಾವ' ಯಶಸ್ವಿಯಾಗಿದೆ. ಗಾಂಧೀಜಿಯಂಥವರ ಬದುಕಿನ ಬೆಳಕಿಗೆ ಬರದಿರುವ ಮುಖವೊಂದನ್ನು ಅದು ಚೆನ್ನಾಗಿ ಹೇಳಿದೆ. ನಾವೆಲ್ಲರೂ ಬಾಲ್ಯದಲ್ಲಿ ಒಂದಲ್ಲ ಒಂದು ಸಂದರ್ಭದಲ್ಲಿ ಸಾಮಾಜಿಕ ಕಟ್ಟುಪಾಡುಗಳ ಬೇಲಿಯನ್ನು ದಾಟಿರುವವರೇ. ಈ ಬೇಲಿಯನ್ನು ದಾಟಲು ಪ್ರೇರೇಪಿಸುವವರು ಎಲ್ಲರ ಬದುಕಲ್ಲೂ ಬಂದಿರುತ್ತಾರೆಂಬುದನ್ನು ಈ ಅಂಕಣ ತಿಳಿಸಿದೆ. ಆದರೆ, ಇದನ್ನು ಬಹುತೇಕರು ಗುಟ್ಟಾಗಿಟ್ಟಿರುತ್ತಾರೆ. ಸುಸಂಸ್ಕೃತರ ದೃಷ್ಟಿಯಲ್ಲಿ ಅಂಥವರು ದಾರಿತಪ್ಪಿದವರಾದರೂ; ನಾವು ಮಾಗಲು, ಪಕ್ವವಾಗಲು, ಪಳಗಲು ಗಾಂಧೀಜಿಯವರ ಬದುಕಿನಲ್ಲಿ ಬಂದ ಅಬ್ದುಲ್ಲರಂಥವರು ಬೇಕಾಗುತ್ತದೆಂಬುದನ್ನು ಅದು ತಿಳಿಸಿದೆ. ಕತೆಗಾರರು ತಮ್ಮ ಬದುಕಿನಲ್ಲಿ ಬಂದ ವಿಜಯಕುಮಾರ್ ಎಂಬ ಅಬ್ದುಲ್ಲಾ ಬಗ್ಗೆ ನಿಸ್ಸಂಕೋಚವಾಗಿ ಹೇಳಿರುವುದು ಅವರ ದಿಟ್ಟತನಕ್ಕೆ ನಿದರ್ಶನವಾಗಿದೆ. ಹೀಗೆ, ತಮ್ಮ ಖಾಸಗಿ ಅನುಭವವನ್ನು

ಎಲ್ಲರ ಬದುಕಿನೊಂದಿಗೆ ಬೆಸೆದು ಬಿಡುವ ರೀತಿ ವಿಶಿಷ್ಟವಾದುದಾಗಿದೆ. ಅಲ್ಲದೆ, ಇದು ಅರೆ ಅಂತ ನಮಗನ್ನಿಸದಂತಿರುವುದು ಇದರ ಧನಾತ್ಮಕ ಅಂಶವಾಗಿದೆ. ಅವರ ಯಶಸ್ವಿ ಕತೆಗಳು ಒಂದು ವಿಧಾನವನ್ನು ಅನುರಸರಿಸಿದಂತಿದೆ. ಒಂದು ವಿಚಾರ, ಅನುಭವ, ಪಾತ್ರಗಳಿಗೆ ಸಂಬಂದಿಸಿದಂತೆ ಒಂದು ಪೀಠಿಕೆ; ನಂತರ ಅವುಗಳ ಸಂಗ್ರಹ ವಿವರಣೆ, ವಿಶ್ಲೇಷಣೆ, ಅದನ್ನು ಗ್ರಹಿಸಿದ ಪರಿಯನ್ನು ಸಾದರಪಡಿಸುತ್ತಾ, ಅಲ್ಲಿಯವರೆಗೆ ತಾವು ಹೇಳಿದ್ದರ ಹಿನ್ನಲೆಯಲ್ಲಿ ಅದಕ್ಕೊಂದು ಮುಕ್ತಾಯ ಕೊಡುವುದು ಆ ವಿಧಾನದ ರೀತಿ.

## ಅಧ್ಯಾಯ-೭

## ಸತ್ಯನಾರಾಯಣ ಕತೆಗಳ ವಿಭಿನ್ನ ಮಾದರಿ

ಸತ್ಯನಾರಾಯಣ ಅವರು ಗದ್ಯಶೈಲಿಯ ಆರಾಧಕರು, " ರಾಜಧಾನಿಯಲ್ಲಿ ಶ್ರೀಮತಿಯರು" ಕೃತಿಯನ್ನು ಹೊರತುಪಡಿಸಿದರೆ ತಮ್ಮ ಮಿಕ್ಕೆಲ್ಲ ಕೃತಿಗಳಲ್ಲಿ ಅವರು ಕಾವ್ಯದ ಗುಣವನ್ನು ಬಳಸಿರುವುದು ಅಪರೂಪ. ಇವರ ಬರವಣಿಗೆಯಲ್ಲಿ ಅನುಭವ ನಿರೂಪಣೆ, ಭಾವನೆ, ವಿಚಾರ ಮುಂತಾದ ಬಗೆಗಳು ನಿರೂಪಕನಿಗೆ ಸಹಜವಾದ ಶೈಲಿಯಲ್ಲಿಯೇ ಇವೆ.

ಸತ್ಯನಾರಾಯಣ ಅವರು ಕಥೆಗಳ ರಚನೆಯಲ್ಲಿ ಭಾಷೆಯ ಸಾಂಸ್ಕೃತಿಕ ಪದಕೋಶಕ್ಕಿಂತ ಹೆಚ್ಚಾಗಿ ಆಪ್ತ ಪದಕೋಶವನ್ನು ಬಳಸಿಕೊಂಡಿದ್ದಾರೆ. ಅವರ ಕಥನದ ಸಮಗ್ರ ಒಲವಿರುವುದು ವಿವರಣೆ, ವ್ಯಾಖ್ಯಾನ, ಮತ್ತು ಅನುಭವದ ಪುನರ್ರಚನೆಯ ಕಡೆಗೆ. ಇವರ ಅತ್ಯುಕ್ತಿಯ ಶೈಲಿಗೆ ಇದೂ ಒಂದು ಕಾರಣ ಎಂದು ವಿವರಿಸಬಹುದು.

ಮೊದಲನೆಯದಾಗಿ ಸಾಹಿತ್ಯವನ್ನು ಅದರ ಸೃಜನಶೀಲ ನೆಲೆಯಿಂದಲೂ ಅಸಾಹಿತ್ಯಕ ನೆಲೆಯಿಂದಲೂ ಒರೆಹಚ್ಚಿ ನೋಡಬಲ್ಲ ಸಾಹಿತಿ-ಚಿಂತಕ ಮತ್ತು ಸಾಮಾಜಿಕ ನೆಲೆಯ ಹೋರಾಟಗಳಲ್ಲಿ ಸರಿಸಮನಾಗಿ ತೊಡಗಿಕೊಂಡಿರುವ ಕೆ.ಫಣಿರಾಜ್ ಇಲ್ಲಿ ಕೆ.ಸತ್ಯನಾರಾಯಣರ ಸಾಹಿತ್ಯಕ ಕಾಳಜಿಗಳನ್ನೂ, ಬದುಕಿನ ಕುರಿತ ಅವರ ಕುತೂಹಲ ಮತ್ತು ತಾತ್ವಿಕ ನಿಲುವುಗಳನ್ನೂ ವಿಮರ್ಶಿಸಿ ಬರೆದಿರುವ ವಿಸ್ತೃತವಾದ ಮುನ್ನುಡಿ.

ಎರಡನೆಯದು, ಇಲ್ಲಿನ ಕಥೆಗಳು ಸುತ್ತಿಕ್ಕುವ ನಕ್ಸಲ್, ಕಮ್ಯುನಿಸಂ, ದೇವರು, ದಲಿತರು, ಶ್ರದ್ಧೆ ಮತ್ತು ನಂಬಿಕೆ, ರಾಜಕೀಯಗಳಂಥ ಹೊಸ ತಲೆಮಾರಿನ ಕತೆಗಾರರು ಮರೆತಂತಿರುವ; ಆದರೆ ತಾತ್ವಿಕ ನಿಲುವೇ ಮಂಚೂಣಿಯಲ್ಲಿಲ್ಲದ-ಬದುಕು ಮತ್ತು ಸಾಮಾನ್ಯನ ದೈನಂದಿನಗಳೇ ಪ್ರಧಾನ ಕಾಳಜಿಯಾಗಿರುವ ವೈಶಿಷ್ಟ್ಯವನ್ನು ಹೊಂದಿರುವುದು.

ಮೂರನೆಯದು, ಇಲ್ಲಿನ ಹೆಚ್ಚಿನ ಕತೆಗಳು ಕೆ.ಸತ್ಯನಾರಾಯಣರ ಎಂದಿನ ಶೈಲಿ ಒಂದು ಹೊರಳುದಾರಿಯಲ್ಲಿರುವುದನ್ನು ಸ್ಪಷ್ಟಪಡಿಸುತ್ತಿರುವುದು.

ನಾಲ್ಕನೆಯದು ಮತ್ತು ಪ್ರಸ್ತುತ ಬರಹಕ್ಕೆ ಮುಖ್ಯ ಪ್ರೇರಣೆಯಾಗಿರುವುದು, ಸತ್ಯನಾರಾಯಣರ ಕತೆ-ಕಾದಂಬರಿಗಳಲ್ಲಿ ಮತ್ತೆ ಮತ್ತೆ ಪ್ರಸ್ತಾಪಿಸಲ್ಪಟ್ಟು

ಜಿಜ್ಞಾಸೆಗೊಳಪಡುತ್ತಿರುವ, ಸಾಹಿತ್ಯವನ್ನು ರಾಚನಿಕವಾಗಿಯೂ ನಿರಚನಾ ಮಾಧ್ಯಮವಾಗಿಯೂ ಕಾಣುತ್ತ ಸೂಕ್ಷ್ಮಸಂವೇದಿ ಬರಹಗಾರನೊಬ್ಬ ಎದುರಿಸುವ ಬಿಕ್ಕಟ್ಟುಗಳನ್ನು ಕುರಿತೇ ಇಲ್ಲಿನ ಕೆಲವು ಕತೆಗಳು ಪ್ರೇರೇಪಿಸುತ್ತಿರುವ ಚಿಂತನಾಕ್ರಮ.

ಸತ್ಯನಾರಾಯಣ ಅವರ ಕತೆಗಳ ಸಂಕಲನವು ಮಹತ್ವದ್ದು ಎನ್ನಲು ಐದನೆಯ ಕಾರಣವೂ ಒಂದಿದೆ. ಇವತ್ತು ಚಿತ್ತಾಲ, ಅನಂತಮೂರ್ತಿಯವರಂಥ ಹಿರಿಯರು, ರಾಘವೇಂದ್ರ ಪಾಟೀಲ, ಜಯಂತ್ ಕಾಯ್ಕಿಣಿ, ವಿವೇಕ ಶಾನಭಾಗರಂಥ ಪ್ರಬುದ್ಧ ಕತೆಗಾರರು, ಪ್ರಹ್ಲಾದ ಅಗಸನಕಟ್ಟೆ, ಶ್ರೀಧರ ಬಳಗಾರ, ವಸುದೇಂದ್ರ ಮೊದಲಾದ ನಿನ್ನೆ ಮೊನ್ನೆಯಷ್ಟೇ ಹೊಸ ತಲೆಮಾರಿನವರು ಎಂದು ಕರೆಸಿಕೊಳ್ಳುತ್ತಿದ್ದ ಸಮರ್ಥ ಕತೆಗಾರರು ಮತ್ತು ಮುವ್ವತ್ತರ ಆಸುಪಾಸಿನ ವಯೋಮಾನದ ಅದ್ಭುತ ಪ್ರತಿಭೆಯ ಹಲವು ಹೊಸ ಕತೆಗಾರರೂ ಏಕಕಾಲಕ್ಕೆ ಬರೆಯುತ್ತಿದ್ದಾರೆ. ಈ ಕಾಲಘಟ್ಟದಲ್ಲಿ ಕೆ.ಸತ್ಯನಾರಾಯಣರಂಥ ಕಳೆದ ಮೂರು ದಶಕಗಳಿಂದಲೂ ಬರೆಯುತ್ತ ಬಂದಿರುವ ಒಬ್ಬ ಕತೆಗಾರ ತೋರುತ್ತಿರುವ ಜೀವನಪ್ರೀತಿ, ಪ್ರಯೋಗಶೀಲತೆ ಮತ್ತು ಕಥನ ಕಲೆಯ ಕುರಿತಾದ ಜಿಜ್ಞಾಸೆ– ಮಹತ್ವದ್ದಾಗಿದೆ.

ಸತ್ಯನಾರಾಯಣರವರು ಕತೆ ಬರೆಯುವ ಮುನ್ನ ಓದುಗರೊಡನೆ ಹೀಗೆ ಹೇಳಿಕೊಂಡಿದ್ದಾರೆ "ಎಷ್ಟಲ್ಲಾ ಕತೆ ಬರೆದರೂ ತಿಳಿಯುವುದೇ ಇಲ್ಲ. ಕತೆಯೆಂದು ನಾನು ಭಾವಿಸಿ ಬರೆಯಲು ಕುಳಿತಾಗ, ಹಾಗೆ ಬರೆಯುತ್ತಾ ಹೋಗುವಾಗ ಹೊಳೆದದ್ದು, ನಡೆದದ್ದು ಎಲ್ಲವನ್ನೂ ಕತೆಯೊಳಗೆ ತರಬೇಕೋ ಬೇಡವೋ? ಹಾಗೆ ನಡೆದದ್ದು ಹೊಳೆದದ್ದನ್ನೆಲ್ಲ ಕತೆಯೊಳಗೆ ಸೇರಿಸುತ್ತಾ ಹೋದರೆ ಕತೆಯ ಕೇಂದ್ರದ ಗತಿ, ಧ್ವನಿ ಸಾವಯವ ಶಿಲ್ಪದ ಗತಿ ಏನಾಗಬೇಡ? ರೂಪಕದ ಗುಣ ತೆಳುವಾಗುವುದಿಲ್ಲವೇ! ಈ ಪ್ರಶ್ನೆಗಳೆಲ್ಲಾ ಸರಿ. ಆದರೆ ಕತೆ ಬರೆಯುವಾಗಿನ ಸಮಯದಲ್ಲಿ ನಮಗೆ ಒದಗುವ ಘಟನೆಗಳು, ಎದುರಾಗುವ ವ್ಯಕ್ತಿಗಳೇಕೆ ಬರೆಯುತ್ತಿರುವ ಒಂದೇ ಒಂದು ಕತೆಯನ್ನು ಮನ್ನಿಸುತ್ತಾರೆ ಹೇಳಿ? ಈ ಗೊಂದಲದಲ್ಲೇ ಕತೆಯೊಂದಕ್ಕೆ ಹೊಳಹು ಹಾಕುತ್ತಾ ಬರೆಯುತ್ತಿದ್ದ ಕಾಲಾವಧಿಯಲ್ಲಿ ನಡೆದದ್ದನ್ನು ನಿಮಗೆ ಒಪ್ಪಿಸಿಬಿಡುತ್ತೇನೆ. ಇದೆಲ್ಲ ಒಂದೇ ಕತಯೇ ಅಲ್ಲವೇ. ಒಂದೇ ಕತೆ ಮಾತ್ರವಾಗಬೇಕೆ ಎಂಬುದು ನಿಮ್ಮ ತೀರ್ಮಾನಕ್ಕೆ ಬಿಟ್ಟಿದ್ದು. ಈ ತೀರ್ಮಾನವನ್ನು ನಿಮಗೆ ಬಿಟ್ಟಿರುವುದರಿಂದಲೇ ಕತೆಗೆಂದು ಇಟ್ಟುಕೊಂಡಿದ್ದ ಶೀರ್ಷಿಕೆ ಬಿಹಾರದ ಸಿಟ್ಟು ಮತ್ತು ಗುಂತೂರಿನ ಕಾರವನ್ನು ಕೂಡ

ಕೈಬಿಟ್ಟಿದ್ದೇನೆ. ಬನ್ನಿ, ನೋಡುವ ಏನಾಗುತ್ತದೆ" ಇದೆಲ್ಲ ಒಂದೇ ಕತೆಯೇ! ಕತೆ ಆರಂಭವಾಗುವ ಪರಿ.

ನಕ್ಸಲ್ ವರಸೆ ಕತೆಯ ಪ್ರಧಾನ ಗುಣ, ಒಂದು ಕಥಾನಕವಾಗಿ ಇದನ್ನೆಲ್ಲ ಹೇಳಲು ಸಾಧ್ಯವೇ ಇಲ್ಲ ಎಂದುಕೊಂಡಿದ್ದನ್ನು ಅತ್ಯಂತ ಕುತೂಹಲಕರ ಕಥನವನ್ನಾಗಿಸಿರುವುದು. ನಕ್ಸಲ್ ಅಥವಾ ಅಂಥ ಯಾವುದೇ ಸಾಮಾಜಿಕ ಬದಲಾವಣೆಯನ್ನು ಬಯಸಿ ನಡೆಯುತ್ತಿರುವ ಕ್ರಾಂತಿಯ ಆಂತರಿಕ ಪಲ್ಲಟಗಳನ್ನು ಕಾಲ-ದೇಶ ಪರಿಮಿತಿಯಲ್ಲಾದರೂ (ಮುಖ್ಯವಾಗಿ ಆಂಧ್ರಕ್ಕೆ ಮತ್ತು ಎರಡು ತಲೆಮಾರಿಗೆ) ಗುರುತಿಸುವುದು, ಅದರ ಎಲ್ಲ ಆಯಾಮಗಳಲ್ಲಿ ಗುರುತಿಸುವುದು ಸುಲಭದ ಸವಾಲೇನೂ ಅಲ್ಲ. ಇದನ್ನು ಕೆ. ಸತ್ಯನಾರಾಯಣ ತಮ್ಮ ಕತೆಯಲ್ಲಿ ಸಾಧಿಸಿದ್ದಾರೆ. ಸಾಧಾರಣವಾಗಿ ಸತ್ಯನಾರಾಯಣ ಅವರು ತಂತ್ರಕ್ಕೆ ಹೆಚ್ಚು ಮಹತ್ವವನ್ನು ನೀಡದವರಾದರೂ, ತಾಂತ್ರಿಕವಾಗಿ ಮಹತ್ವದ್ದೆನಿಸುವ ಜಾಣ್ಮೆಯೊಂದಿಗೆ ಇದನ್ನು ಅವರಿಲ್ಲಿ ನಿಭಾಯಿಸಿರುವುದು ಅವರೊಳಗಿನ ಕಥೆಗಾರ ಪ್ರಯೋಗಶೀಲತೆಯೊಂದಿಗೆ ಸಮಕಾಲೀನ ಕಥನ ಕೌಶಲಗಳಿಗೆ ಸದಾ ತೆರೆದುಕೊಂಡೇ ಇದ್ದಾನೆನ್ನುವುದಕ್ಕೆ ಸಾಕ್ಷಿಯಂತಿದೆ. ಈ ಸಂಕಲನದ ಪ್ರಮುಖ ವೈಶಿಷ್ಟ್ಯವೇ ಇದೆಂದರೂ ತಪ್ಪಾಗಲಾರದು.



ನನಗೆ ಇಲ್ಲಿ ತುಂಬ ಇಷ್ಟವಾದ ಇನ್ನೊಂದು ಅಂಶದ ಬಗ್ಗೆ ಕೂಡ ಹೇಳಬೇಕು. ಅದು, ಕನಸು-ಭ್ರಮೆ-ಅತೀಂದ್ರಿಯ ಸಂಗತಿಗಳೆಲ್ಲ ಕೆ.ಸತ್ಯನಾರಾಯಣರ ಈಚಿನ ಕತೆಗಳಲ್ಲಿ ಹೊಸದಾಗಿ ಕಾಣಿಸಿಕೊಳ್ಳತೊಡಗಿರುವುದರ ಕುರಿತು. ಕೆ.ಸತ್ಯನಾರಾಯಣರ ಹಿಂದಿನ ಯಾವುದೇ ಕತೆಗಳಲ್ಲಿ ಇಂಥ ವಿವರಗಳನ್ನು ಏಕಮಾತ್ರ ಈ ಪರಿಯಲ್ಲಿ ಕಂಡ ನೆನಪಿಲ್ಲ. ಇವರ ಕತೆಗಳಲ್ಲಿನ ದೇವರು, ಮತ್ತು ಮಾಧವ ಮೆನನ್, ಇನ್ನೊಬ್ಬ ವೇಶ್ಯೆಯ ಪ್ರಶಸ್ತಿ, ಕಮ್ಯುನಿಸ್ಟ್ ರಾಮಭಟ್ಟರ ಜೋಯಿಸ ಪ್ರೀತಿ, ಮೊದಲ ಅ-ದಲಿತ ಕಥೆ, ಕತೆಯಲ್ಲಿ ಕೂಡ ಈ ತರದ ವಿವರಗಳಿಗೆ ಕೆ. ಸತ್ಯನಾರಾಯಣರು ತೆರೆದುಕೊಂಡಿರುವುದನ್ನು ಗಮನಿಸಬಹುದು. ಬದುಕಿನಲ್ಲಿ ಭಮೆಯ ಹಾಗೆ ಕಾಣುವ ಸಂಗತಿಗಳು, ಭ್ರಾಂತಿಗಳು, ಕನಸು, ವಿವಶತೆ ಎಲ್ಲ ಇದ್ದೇ ಇವೆ. ಅತೀಂದ್ರಿಯವೆನಿಸುವ ಸಹಜಗಳು ಕೂಡ ಇವೆ. ಇವನ್ನೆಲ್ಲ ವೈಚಾರಿಕ-ಬೌದ್ಧಿಕ ನೆಲೆಗೆ ಕುಂದಾಗುತ್ತದೆ. ವಾಸ್ತವಕ್ಕೆ ದೂರವಿಡುವುದು ಅಹಂಕಾರವಾಗುವುದಿಲ್ಲವೇ. ಕಾರಂತರ ಕಾದಂಬರಿಗಳಲ್ಲಿ ಕೂಡ ಭೂತ-ಪ್ರೇತಗಳು, ಪ್ರಾಣಿಗಳು ಮಾತನಾಡುವುದಿದೆ! ಅಷ್ಟರ ಮಟ್ಟಿಗೆ

ಕತೆ, ಕಥಾನಕವಾಗಿ ಎಲ್ಲ ಬಗೆಯ ಅಭಿವ್ಯಕ್ತಿ ತಂತ್ರಗಳಿಗೆ ತೆರೆದುಕೊಂಡಿದ್ದರೇ ಚಂದ. ಈ ನಿಟ್ಟಿನಿಂದಲೂ ಇಲ್ಲಿನ ಕತೆಗಳು ಕೆ.ಸತ್ಯನಾರಾಯಣರ ಕತೆಗಳಲ್ಲಿ ತಂತ್ರ ವಿಶೇಷವಾದ ಬಳಕೆಗೆ ಬರುತ್ತಿರುವುದನ್ನು ಕಾಣಿಸುತ್ತಿವೆ. ಇದನ್ನೆಲ್ಲ ಈಗಲೂ ತಾಂತ್ರಿಕ ಜಾಣ್ಮೆಯ ಕುಸುರಿ ಕೆಲಸವೋ ಶಿಲ್ಪವೋ ಅಲ್ಲ ಎಂದು ವಾದಿಸಬಹುದು. ಕಥಾನಕ ಕತೆಗಾರನನ್ನು ತಟ್ಟಿದ್ದು, ತಲುಪಿದ್ದು ಹೀಗೆಯೇ ಇದ್ದರೂ ಇರಬಹುದು. ಆದರೆ ಸಾಹಿತ್ಯದ ವಿದ್ಯಾರ್ಥಿಯಾಗಿ ಈ ಬಗೆಯ ಕಟ್ಟಡವನ್ನು ತಾಂತ್ರಿಕ ಜಾಣ್ಮೆಯನ್ನಾಗಿಯೂ ಕಾಣಬಹುದು.

ಸಾಹಿತ್ಯ ನಮ್ಮ ಬದುಕನ್ನು ಅರಳಿಸುತ್ತಲೇ ಮತ್ತೆ ಮತ್ತೆ ಅದನ್ನ ಶ್ರೀಮಂತಗೊಳಿಸುತ್ತಲೇ ಇರಬಲ್ಲುದೆಂಬ ಕಾರಣಕ್ಕೇ ಅಲ್ಲವೆ ನಮಗೆ ಅದೆಂದರೆ ಇಷ್ಟೆಲ್ಲ ಪ್ರೀತಿ? ಆದರೆ ಎಲ್ಲ ಬರಹಗಳೂ ಹಾಗೆ ಇರುವುದಿಲ್ಲ ಎನ್ನುವುದರಿಂದ ಯಾವುದು ಒಳ್ಳೆಯದು, ಯಾವುದು ಸಾಧಾರಣ ಎಂಬುದೆಲ್ಲ ತೀರ್ಮಾನವಾಗುತ್ತದೆ.

ಕೆ.ಸತ್ಯನಾರಾಯಣರ ಎಲ್ಲಾ ಬರಹಗಳಲ್ಲೂ, ಸತ್ಯದ ಶೋಧವೇ ನಡೆದಿರುತ್ತದೆ ಎನ್ನುವುದು ಒಂದು ಮುಖ್ಯ ಅಂಶ. ಇನ್ನೊಂದು, ಕೆ. ಸತ್ಯನಾರಾಯಣರ ಎಲ್ಲಾ ಬರಹದಲ್ಲೂ ಇರುವ, ಎದ್ದು ಕಾಣುವ ಪ್ರಾಮಾಣಿಕತೆ. ಇದು ಇಲ್ಲಿ ಬಹಳ ಮುಖ್ಯ. ಇವತ್ತು ಸಾಹಿತ್ಯಸೃಷ್ಟಿಯ ಹಂತದಲ್ಲಿ ಹೊಸ ಪೀಳಿಗೆಯನ್ನು ಅನೇಕ ವಿಧದಲ್ಲಿ ಕಾಡುತ್ತಿರುವ ತೊಡಕುಗಳಲ್ಲಿ ಇದು ಮಹತ್ವದ್ದೆಂದು ಕಾಣುತ್ತದೆ. ನೇರ ಅನುಭವಕ್ಕೆ ದಕ್ಕಿದ್ದನ್ನು ಮಾತ್ರ ಬರೆಯುವ, ಬರೆಯಬೇಕೆನ್ನುವ ಒತ್ತಡ ಒಂದು ಕಡೆ, ಬರಹಗಾರ ತನ್ನ ಕಂಫರ್ಟ್‌ಝೋನ್ ಬಿಟ್ಟು ಚಾಚಿಕೊಳ್ಳಬೇಕು ಎನ್ನುವ ನಿರೀಕ್ಷೆ ಇನ್ನೊಂದು ಕಡೆ ಅವನನ್ನು ಕಾಡುತ್ತಿರುವಾಗಲೇ ಜಾಗತಿಕ ಮಟ್ಟದಲ್ಲಿ ಹೊಸ ತಲೆಮಾರು ಎತ್ತಿಕೊಳ್ಳುತ್ತಿರುವ ವಸ್ತು, ಪ್ರಸ್ತುತ ಪಡಿಸಲು ಬಳಸುತ್ತಿರುವ ತಂತ್ರ ಮತ್ತು ಅನುಭವಕ್ಕೆ ತೆರೆದುಕೊಳ್ಳುತ್ತಿರುವ ಪರಿ ಗಮನಾರ್ಹವಾಗಿದೆ.

ಸಾಹಿತ್ಯ ಅಥವಾ ಫಿಕ್ಷನ್ ಎನ್ನುತ್ತೇವಲ್ಲ, ಕತೆ, ಕಾದಂಬರಿಯಂಥವು, ಅವು ಹಲವು ರೀತಿಗಳಲ್ಲಿ ಹುಟ್ಟುತ್ತವೆ. ಉದಾಹರಣೆಗೆ ನಾವು ಮಹಿಳಾ ಸಾಹಿತ್ಯ ಅಂತ ಸಾಧಾರಣ ಅರ್ಥದಲ್ಲಿ ಏನನ್ನು ಕರೆಯುತ್ತೇವೆಯೋ ಅವುಗಳಲ್ಲಿ ಒಂದು ಭ್ರಮಾಧೀನ ಕಲ್ಪನೆ ಇರುತ್ತದೆ. ಸುಂದರ ಯುವಕ, ಆಕರ್ಷಕವಾಗಿ ಸೀರೆಯುಟ್ಟ ಯೌವ್ವನ ತುಂಬಿದ ಯುವತಿ, ಅವರ ಪ್ರೇಮ, ಅದಕ್ಕಿರುವ ಅಡ್ಡಿ ಆತಂಕಗಳು, ಸ್ಪರ್ಧೆ ಒಡ್ಡುವ ಇನ್ನೊಬ್ಬ ಹುಡುಗನೋ

ಹುಡುಗಿಯೋ, ಸಂಪ್ರದಾಯಸ್ಥ ಕುಟುಂಬದ ಹಿನ್ನಲೆ, ಜಾತಿ, ಬಡತನ ಇತ್ಯಾದಿಗಳನ್ನೇ ಹಲವಾರು ಬಗೆಯಲ್ಲಿ ಊಹಿಸಿ ಆಕರ್ಷಕವಾಗಿ ಹೆಣೆದು ಸಿನಿಮೀಯ ಕತೆ ಬರೆದು ರಂಜಿಸುವುದು ಸಾಧ್ಯ. ನಮ್ಮ ಮೊದಲ ಓದು, ಸಾಹಿತ್ಯ ಎಂದು ನಂಬಿಕೊಂಡು, ಇದರದ್ದೇ ಆಗಿರುತ್ತದೆ. ಪತ್ತೇದಾರಿ, ಥ್ರಿಲ್ಲರ್ಸ್, ಮ್ಯಾಗಝೀನ್ ಕತೆ-ಕಾದಂಬರಿಗಳು ಎಲ್ಲ ಇದರ ಆಸುಪಾಸು.

ಇನ್ನೊಂದು ಸ್ತರದ್ದನ್ನು ನಮ್ಮ ಜಯಂತ್ ಕಾಯ್ಕಿಣಿ, ವಿವೇಕ್ ಶಾನಭಾಗ, ರಾಘವೇಂದ್ರ ಪಾಟೀಲರು ಬರೆಯುತ್ತಾರೆ. ವಾಸ್ತವ ಬದುಕಿನಿಂದಲೇ ಇವರು ಪ್ರತೀಕಗಳನ್ನು ಪಡೆಯುತ್ತಾರೆ. ಯಾಕೆ ಅವನ್ನೇ ಆಯ್ದರು ಎಂದರೆ ಇವರಿಗೆ ಇವರ ಕತೆಯ ಉದ್ದೇಶಕ್ಕೆ ಬೇಕಾಗಿದ್ದವು ಅವು. ಮತ್ತು ಅವು ಮಾತ್ರ ಎನ್ನುವ ಕಾರಣಕ್ಕೆ. ಹೀಗೆ ಆಯ್ದ ಪ್ರತೀಕಗಳನ್ನಿಟ್ಟುಕೊಂಡು ಇವರು ತಮ್ಮದೇ ಒಂದು ವಿಚಾರವನ್ನು ಹೇಳುತ್ತಾರೆ. ಇವರದೂ ಶೋಧವೇ, ಅದು ಪ್ರಾಮಾಣಿಕವಾದದ್ದೇ. ಆದರೆ ಇವರು ತಾವು ಆಯುವ ಪ್ರತೀಕಗಳ ಬಗ್ಗೆ ವ್ಯಾಮೋಹವುಳ್ಳವರು ಮತ್ತು ಇದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕಾದರೆ, ಇವರು ತಮ್ಮ ಇಷ್ಟದ ಪ್ರತೀಕಗಳನ್ನು ಬಿಟ್ಟು ಬರೆದರೆ, ಬರೆಯುತ್ತ ಅವೇ ಶೋಧಗಳಲ್ಲಿ ತೊಡಗಿದರೆ ಏನಾಗಬಹುದೋ ಅದನ್ನು ಊಹಿಸಬೇಕಾಗುತ್ತದೆ. ಈ ಕತೆಗಾರರೂ ಅಂಥ ರಿಸ್ಕ್ ತೆಗೆದುಕೊಂಡಿರುವುದು ಅಲ್ಲಲ್ಲಿ ಕಾಣಿಸುತ್ತದೆ. ಇಲ್ಲವೆಂದಲ್ಲ. ಆದರೂ ಮೇಲ್ನೋಟಕ್ಕೆ ನಾನು ಹೇಳುತ್ತಿರುವುದು ಈ ಕತೆಗಾರರ ವಿವರಗಳ ಮೋಹವಾಗಿ ಕಾಣಿಸಬಹುದು. ಆದರೆ ನಾನು ಹೇಳುತ್ತಿರುವುದು ಅಷ್ಟನ್ನೇ ಅಲ್ಲ. ಇವರ ಕಥಾನಕಗಲ್ಲಿ ನಾವು ಮುಖಾಮುಖಿಯಾಗುವ ಪಾತ್ರಗಳ ವ್ಯಕ್ತಿತ್ವಕ್ಕೆ ಸಂಬಂಧಿಸಿ ಇದನ್ನು ನಾನು ಹೇಳುತ್ತಿರುವುದು.

ಈ ಬಗೆಯ ಕಥೆಗಳಲ್ಲಿ ಪ್ರಾಮಾಣಿಕತೆಯೇ ನಿಜವಾದ ಬಂಡವಾಳ ಅಂತ ನನಗನಿಸಿದೆ. 'ವೇಶ್ಯೆಯೊಬ್ಬಳ ಪ್ರಶಸ್ತಿ' ಕತೆಯನ್ನೇ ತೆಗೆದುಕೊಂಡು ನೋಡಿದರೂ ಈ ಅಂಶ ಅತ್ಯಂತ ಸ್ಪಷ್ಟ. ಕೆ.ಸತ್ಯನಾರಾಣರಿಗೆ ಕತೆಯನ್ನು ಕತೆ ಬರೆಯುವ, ಸೃಜನಶೀಲ ಅಭಿವ್ಯಕ್ತಿಯ ರಚನಾತ್ಮಕ ಮಾನದಂಡಗಳಿಂದ ಅದ್ಭುತ-ಸುಂದರ ರಚನೆಗೊಳಿಸುವುದಕ್ಕಿಂತ ಅದರ ಅಸಾಹಿತ್ಯಕ ಶೋಧ ಮುಖ್ಯ ಮತ್ತು ಆ ಶೋಧ ಪ್ರಾಮಾಣಿಕವಾಗಿ ನಡೆಯಬೇಕಾದ್ದು ಮುಖ್ಯ. ಹಾಗೆಯೇ, ಈ ಶೋಧ ಆಯ್ದ ವಿವರಗಳಲ್ಲಿ ನಡೆದರೆ ತಾನು ಎಲ್ಲಿ ಯಾವೊಂದು ಸತ್ಯದಿಂದ

ದೂರವಾಗುತ್ತೇನೋ, ಪರ್ಯಾಯದ ಯಾವೊಂದು ಸತ್ಯವನ್ನು ಕಳೆದೊಕೊಂಡೇ ಬಿಡುತ್ತೇನೋ ಎಂಬ ಭಯ ಕೂಡ ಇದೆ ಕೆ.ಸತ್ಯನಾರಾಯಣರಿಗೆ, ಹಾಗಾಗಿ ಕೆ.ಸತ್ಯನಾರಾಯಣ ಕತೆ ಹೇಳುವಾಗ ಇದೆಲ್ಲ ಬೇಡ, ಅದು ಇಲ್ಲಿ ಅಗತ್ಯವಿಲ್ಲ ಎಂದು ವಿಪರೀತ ತಲೆಕೆಡಿಸಿಕೊಂಡಂತೆ ಕಾಣುವುದಿಲ್ಲ. ಇದಕ್ಕೆ ನಾವು ಸತ್ಯನಾರಾಯಣರ ಕತೆಗಳು ಅತಿಯಾದ ವಾಚಾಳಿತನದಿಂದ ಬಳಲುತ್ತವೆ ಎಂದು ಹೇಳಲು ಸಾಧ್ಯವಾದದ್ದು.

ಕೆ.ಸತ್ಯನಾರಾಯಣರ 'ಕಮ್ಯುನಿಸ್ಟ್ ರಾಮಭಟ್ಟರ ಜೋಯಿಸ ಪ್ರೀತಿ' ಕತೆಗೆ ಬಂದರೂ ಇದೇ ಅಂಶ ಕಾಣುತ್ತದೆ. ಕತೆ ಶುರುವಾಗುವುದು ಎಲ್ಲಿ ಎನ್ನುವ ಸತ್ಯ ಗೊತ್ತಿದ್ದೂ ಆ ಕತೆಗೂ ಎರಡು ಪುಟಗಳ ಹಿಂದಿನಿಂದ ಕೆ.ಸತ್ಯನಾರಾಯಣರ ಕಥಾನಕ ತೊಡಗುತ್ತದೆ. ಇಲ್ಲಿ ನಮಗೆ ಕೆ.ಸತ್ಯನಾರಾಯಣರ ಕತೆಗಾರನಾಗುವ ಉತ್ಸಾಹಕ್ಕಿಂತಲೂ ಅವರಿಗೆ ಬದುಕು ಹೆಚ್ಚು ಮುಖ್ಯವಾದದ್ದು. ಬದುಕಿನ ಶೋಧ ಹೆಚ್ಚು ಮುಖ್ಯವಾದದ್ದು. ಮತ್ತು ಅವರ ಶೋಧದ ಪ್ರಾಮಾಣಿಕತೆ ಕತೆಯ ಶಿಲ್ಪದ ಅಗತ್ಯಗಳನ್ನು, ಮಿತಿಗಳನ್ನು ಮೀರಿದ್ದು ಎನ್ನುವುದಕ್ಕೆ ಪುರಾವೆಗಳು ಸಿಗುತ್ತವೆ. ವಿಮರ್ಶಕರಿಗೆ ಇವು ಕೆ.ಸತ್ಯನಾರಾಯಣರ ಕೊರತೆಯಾಗಿ ಕಾಣುವುದು ಕೂಡ ಸಾಧ್ಯವಿದೆ. ಆದರೆ ವಿಮರ್ಶೆಯ ಮಾನದಂಡಕ್ಕೆ ಸರಿಯಾಗಿ ಬರೆಯಲಾದ ಕತೆಗಳಲ್ಲ ಇವು.

ನಮಗೆ ಕೆಲವು ಕತೆಗಾರರು ಗೊತ್ತು. ಇವರು ಒಂದು ಹಂತದಲ್ಲಿ ಬರೆಯುವುದನ್ನು ಬಿಟ್ಟು ಬಿಟ್ಟರು ಇವರಿಗೆ ಇದ್ದಕ್ಕಿದ್ದ ಹಾಗೆ ಅದೆಲ್ಲ ಕೃತಕ, ಏನೋ ಅಲ್ಲಿಂದಿಷ್ಟು ತಂದು ಒಟ್ಟಿಗಿರಿಸಿ, ಜೋಡಿಸಿ, ಈ ಕೋಲಾಜ್ ಹೇಳುವ, ಕೊಡುವ ಸತ್ಯವೇನೆಂದು ಶೋಧಿಸುತ್ತ ಕತೆಕಟ್ಟಿ ಪಡುವ ಸುಖ, ಓದುವವನಿಗೆ ಕೊಡುತ್ತಿದ್ದೇವೆಂದು ತಾವು ನಂಬಿ ಪಡುವ ಸುಖ ಎಲ್ಲ ಖೊಟದಟಿ ಅನಿಸತೊಡಗಿ ಇವರು ಬರೆಯುವುದನ್ನು ಬಿಟ್ಟಿದ್ದಾರೆಯೇ ಹೊರತು ಇನ್ನೇನಲ್ಲ. ಇದನ್ನೆಲ್ಲ ಅವರಿಗೆ ಮಾತುಗಳಲ್ಲಿ ಹೇಳುವುದು ಕಷ್ಟವೆನಿಸಿದರೂ ಇದು ನಾವು ಕಂಡುಕೊಂಡ ಸತ್ಯವೇ. ಕೆ.ಸತ್ಯನಾರಾಯಣರ ವೇಶ್ಯೆಯ ಬಹುಮಾನದ ಕತೆ ಇಂಥ ಶೂನ್ಯಭಾವವೊಂದು ಪ್ರಾಮಾಣಿಕ ಕತೆಗಾರರನ್ನು ಕಾಡುವ ಕುರಿತಾಗಿಯೇ ಇದೆಯಾದ್ದರಿಂದ ಹೆಚ್ಚು ವಿವರಿಸದೇ ಇದೆಲ್ಲ ಎಲ್ಲರಿಗೂ ಅರ್ಥವಾಗುತ್ತದೆ. (ಇಂಥ ಇನ್ನೊಂದು ಕತೆ, 'ಮಧುಗಿರಿ ರಾಮು ಮತ್ತು ಸಾಹಿತಿ ಮುದುಕಪ್ಪ' ಕೂಡ ಇದೇ ಆಶಯವನ್ನು ಹೊಂದಿದ್ದು ಅದು ಕೆ. ಸತ್ಯನಾರಾಯರವರು

ಬರೆದಿರುವ 'ಹಳೆಯ ಕಾಲದ ಹೊಸ ಕತೆ' ಸಂಕಲನದಲ್ಲಿದೆ) ಇಂಥ ಶೂನ್ಯ ನಿಜಕ್ಕೂ ಹೆಚ್ಚಾಗಿ ಕಾಡುವುದು, ಕಾಡಬೇಕಿರುವುದು ಸಿಲೆಕ್ಟ್ ವಿವರಗಳಿಂದ ಸಿಲೆಕ್ಟ್ ಕತೆಗಳಿಲ್ಲದ ನಿತ್ಯ ಬದುಕಿ ನಮಗೆ ಕಲಿಸುವ ಪಾಠಗಳನ್ನ, ನಮ್ಮ ಮೌನದಲ್ಲಿ, ಏಕಾಂತದಲ್ಲಿ ನಾವು ನಡೆಸಿದ ಶೋಧಗಳು ನಮಗೆ ದಯಪಾಲಿಸಿದ್ದನ್ನು ಹೇಳಲು ಪ್ರಯತ್ನಿಸಿದ ಕತೆಗಾರರನ್ನು. ಇದೆಲ್ಲ ಒಂದೇ ಕತೆಯೇ? ಎನ್ನುವ ಅನುಮಾನ ನಮ್ಮ ದೈನಂದಿನ ಬದುಕಿನದ್ದು, ಒಂದು ಸಣ್ಣಕತೆಯದ್ದಲ್ಲ.

ಮುದುಕಿ ಹೇಳಿದ ಸರ್ ಎಂ.ವಿ. ಕಥೆ, ಸರ್.ಎಂ.ವಿ. ತಿಳಿದ ಮುದುಕಿ ಕಥೆಯಲ್ಲಿ ಒಂದು ನದಿಯು ಹರಿಯುವಾಗ ತನ್ನ ಪಾತ್ರದ ಜನರ ಜೀವನಕ್ಕೆ ಅನೇಕ ಅನುಕೂಲಗಳನ್ನು ಮಾಡಿಕೊಡುವಂತೆ ಸರ್.ಎಂ.ವಿ. ಅವರು ಸಹ ತಮ್ಮ ಮಹಾನ್ ವ್ಯಕ್ತಿತ್ವದಿಂದ ಅನೇಕರಿಗೆ ಸಹಾಯ ಮಾಡಿದ್ದಾರೆ. ಅದು ಎಲ್ಲರಿಗೂ ತಿಳಿದಂತೆ ಕೇವಲ ಕನ್ನಂಬಾಡಿ ಮಾತ್ರವಲ್ಲದೆ, ಈ ಕಥೆಯಲ್ಲಿ ಮುದುಕಿಯೂ ತನ್ನದೇ ಸ್ವ-ಅನುಭವದಿಂದ ಕೂಡಿರುವುದರಿಂದ ಕಥೆ ಯಾವ ಭಾಗದಲ್ಲೂ ಸಹ ನಾಟಕೀಯ ಅಥವಾ ಕಾಲ್ಪನಿಕವೆನಿಸುವುದಿಲ್ಲ. ಮುದುಕಿ ಹೇಳಿದ ಕಥೆಯನ್ನು ಯಥಾವತ್ತಾಗಿ ಬರೆಯುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ. ಕೇವಲ ಮುದುಕಿ ತನ್ನ ಗಂಡನ ಬಗ್ಗೆ ಹೇಳಿಕೊಳ್ಳುವ ಸನ್ನಿವೇಶವನ್ನು ಹೊರತುಪಡಿಸಿ ಮಿಕ್ಕೆಲ್ಲ ಅಂಶಗಳು ಸತ್ಯವೆನ್ನುವ ಮಟ್ಟಿಗೆ ಲೇಖಕರು ಕಥೆಯನ್ನು ಬರೆದಿದ್ದಾರೆ.

ಪ್ರೀತಿ ಎಂಬುದು ಸರ್ವಕಾಲಿಕ ವಿಷಯ ಬಣ್ಣ, ರೂಪವಿರದ ನೀರಿನಂತೆ ಎಲ್ಲರಲ್ಲೂ ಇರುತ್ತದೆ. ಆದರೆ ಹೇಳಿಕೊಳ್ಳುವುದು ಕಷ್ಟ, ಹಾಗೆಯೇ ಲೇಖಕರು ಹಾಗೂ ಅವರ ಮಿತ್ರರು ತಮ್ಮ ಪ್ರೇಮದ ಕಥೆಗಳನ್ನು ಹೇಳಿಕೊಳ್ಳುವ ಸಮಯದಲ್ಲಿ ಎಡವಿದ್ದು. ಆದರೆ ಅದೇ ಸಂಧರ್ಭದಲ್ಲಿ ಲೇಖಕರ ಮಿತ್ರರೊಬ್ಬರು ತನಗೆ ತಿಳಿದ ಪುಟ್ಟರಾಜು ಎಂಬ ಯುವಕನ ಕಥೆಯನ್ನು ಹೇಳಲಾರಂಬಿಸಿದ ಸನ್ನಿವೇಶವನ್ನು ಅವಶ್ಯಕತೆಯ ರೂಪದಲ್ಲಿ ಲೇಖಕರು ಸರಾಗವಾಗಿ ಕಥೆ ಸಾಗುವಂತೆ ಬರೆದಿದ್ದಾರೆ. ಪುಟ್ಟರಾಜು-ರತ್ನಿ ವಿವಾಹದವರೆಗೆ ಸಾಮಾನ್ಯ ಕಥೆಯೆನಿಸಿದರೂ ಸಹ, ವಿವಾಹದ ನಂತರ ಪುಟ್ಟರಾಜುವಿನ ಜೀವನದಲ್ಲಿ ಆಗುವ ಏರು-ಪೇರುಗಳು ಮನಕಲಕುವಂಹತದ್ದು. ಲೇಖಕರ ಮಿತ್ರರ ಮಾತಿನಂತೆ ಈ ಕಥೆಯೂ ನೈಜ ಕಥೆಯಾಗಿದ್ದರೂ ಇನ್ನು ಕಥೆಯು ಮುಂದುವರಿಯುತ್ತಿದೆ ಎಂದು ಒತ್ತಿ ಒತ್ತಿ ಹೇಳುತ್ತಾರೆಂಬುದು ಲೇಖಕರ ಮಾತು.

ಈ ಕಥೆಯ ಒಮ್ಮೆ ಮಾದರಿಯಲ್ಲಿ ಮತ್ತು ಶೈಲಿಯಲ್ಲಿ ಬರೆಯುವ ಕಥೆಗಾರ 'ಸಂಭಾವ್ಯ'ವಾದ ಕತೆಗಳನ್ನು ಮಾತ್ರ ಹೇಳಬಲ್ಲ; ಅಸಾಧ್ಯವಾದುದ್ದರ ಕಡೆಗೆ ಕೈ ಚಾಚುವ ಕ್ರಾಂತಿಕಾರಿಯಾಗಲಾರ. ಕುಟುಂಬ ಮತ್ತು ದಾಂಪತ್ಯಗಳು ಒಂದು ನಿರ್ದಿಷ್ಟ ಐಡಿಯಾಲಜಿಯ ಉತ್ಪನ್ನಗಳು ಎಂಬುದು ನಿಜ. ಆದರೆ ಲೇಖಕನಾದವನು, ಆ ಮಿತಿಯ ಒಳಗೂ ಅವು ಅರಳುವ ಅಥವಾ ಮುರುಟಿ ಹೋಗುವ ಸಾಧ್ಯತೆಗಳನ್ನು ಗಮನಿಸದೆ ಇದ್ದರೆ ಆತ ಲೇಖಕನೇ ಅಲ್ಲ. 'ನಿಮ್ಮ ಮೊದಲ ಪ್ರೇಮದ ಕಥೆ' ಕೂಡ ಈ ಬಗೆಯ 'ಸಾಧ್ಯತೆಗಳ' ಒಂದು ಕತೆ. ಕತೆಯ ಕೊನೆಯ ಭಾಗ ಮತ್ತು ಕತೆಯ ಶೀರ್ಷಿಕೆ ಕೂಡ ಇದನ್ನೇ ಧ್ವನಿಸುತ್ತದೆ. ನೋಟವೊಂದು ಆದರೆ ಅದನ್ನು ನೋಡುವ ಆಯಾಮಗಳು ಬೇರೆ ಬೇರೆಯಾಗಿರುತ್ತವೆ ಎಂಬುದಕ್ಕೆ ಸಾಕ್ಷಿಯಂತೆ, ಕಥೆಯನ್ನು ಕೇಳಿದ ಲೇಖಕರು ಹಾಗೂ ಅವರ ಮಿತ್ರರಿಗೆ ಪುಟ್ಟರಾಜುವಿನ ಕಥೆ ಸಾಮಾನ್ಯ ಕಥೆಗಳೊಲ್ಲಂದರಂತೆ ಕಂಡರೆ, ಅದೇ ಕಥೆಯನ್ನು ಕೇಳಿದ ಲೇಖಕರ ಪತ್ನಿ ಭಾವುಕರಾದದ್ದನ್ನು ಕಥೆಯ ಕೊನೆಯ ಭಾಗದಲ್ಲಿ ನೋಡಬಹುದು. ಆದರೂ ಲೇಖಕರು ಕೊನೆಯ ಭಾಗವು ತಮ್ಮ ಸ್ವ-ಅನುಭವದಲ್ಲಿ ನಡೆದ ಘಟನೆಯಾದ್ದರಿಂದ ಇನ್ನುಚೆನ್ನಾಗಿ ವಿವರಿಸಿ ಹೇಳಬಹುದಿತ್ತು, ಎನ್ನುವ ಕೊರಗು ಕೊನೆಯಲ್ಲಿ ಓದುಗರನ್ನು ಕಾಡುತ್ತದೆ.

ಪ್ರಾಮಾಣಿಕತೆಯೇ ಸಹಜ ಕತೆಗಾರನ ಪ್ರಮುಖ ಲಕ್ಷಣವಾಗಿರುವುದರಿಂದಲೇ ಸಮಕಾಲೀನ ಕನ್ನಡ ಸಾಹಿತ್ಯ ಅಥವಾ ಸಣ್ಣ ಕತೆಗಳ ಜಾಯಮಾನ ಯಾವತ್ತೂ ಕೆ. ಸತ್ಯನಾರಾಯಣರ ಕತೆಗಳ ಒಂದು ಲಿಮಿಟ್ ಆಗುವುದೇ ಇಲ್ಲ. ಮಾತ್ರವಲ್ಲ ಕಾಲದ ಎಲ್ಲ ಪರೀಕ್ಷೆಗಳನ್ನು ಈ ಕತೆಗಳು ಗೆಲ್ಲಬಲ್ಲ ಕಸುವು ಪಡೆಯುವುದು ಕೂಡ ಇದರಿಂದಲೇ ಅನಿಸುತ್ತದೆ.

ಇಲ್ಲಿನ ಕೆಲವು ಕತೆಗಳಂತೂ ಹೀಗಲ್ಲದೇ ಬೇರೆ ರೀತಿ ಹೇಳುವುದಕ್ಕೆ ಸಾಧ್ಯವೇ ಇರಲಿಲ್ಲ ಎಂಬಂಥಿವೆ. ನಮ್ಮ ಗಮನ ಸೂಕ್ಷ್ಮವಾಗಿ ಹರಿಯಬೇಕಿರುವುದು ಇಲ್ಲಿಯೇ. ಈ ಕತೆಗಳಲ್ಲಿರುವ ಅನುರಣನ ಶಕ್ತಿ ವಿಶಿಷ್ಟವಾಗಿದೆ. ಈ ಕತೆಗಳೆಲ್ಲ ಒಂಥರ ಕವನಗಳಂತೆ ಪುಟ್ಟದಾಗಿದ್ದರೂ ಓದಿಗೆ ಹೆಚ್ಚು ಗಹನವಾದ ಬಗೆಯಲ್ಲಿ ತೆರೆದುಕೊಳ್ಳುವ ಕತೆಗಳು. ಇಲ್ಲೀರುವ ಅನೂಹ್ಯತೆ, ಹೌದೋ ಅಲ್ಲವೋ ಎಂಬಂತೆ ಅವು ಕಾಣಿಸುವ ಹೊಳಹುಗಳು, ಯಾವುದನ್ನೂ

ಇದಂಇತ್ಥಂ ಎಂಬಂತೆ ಹೇಳದೆ ಬಹಳಷ್ಟನ್ನು ಉಳಿಸಿಬಿಡುವ ಅಪೂರ್ಣತೆಯೇ ಈ ಕತೆಗಳ ನಿಜವಾದ ಶಕ್ತಿ.

ಇಲ್ಲಿ ತೀರ ಹೊಸದು, ವಿಶಿಷ್ಟ ಅನುಭವಕ್ಕೆ ಕಾರಣವಾಗುವಂಥದ್ದು ಮತ್ತು ಚರ್ಚೆಗೆ ವಸ್ತುವಾಗುವುದು ಏನೆಂದರೆ, ಈ ಕತೆಗಳ ನಿರೂಪಣ ವಿದಾನ ಮತ್ತು ತಂತ್ರ. ಸತ್ಯನಾರಾಯಣ ಅವರು ಆಯ್ದುಕೊಂಡ ತಂತ್ರ ಸದ್ಯದ ಕತೆಗೆ, ಇಡೀ ಸಂಕಲನವೇ ಚೌಕಟ್ಟಿಗೆ ಒಗ್ಗುವುದರಿಂದ ವಿಶೇಷವಾದ ತೊಡಕುಗಳಿಗೆ ಎದುರಾಗಿಲ್ಲವೇನೋ ಅನಿಸುತ್ತದೆ. ಅಂದರೆ ಇಲ್ಲಿ ಸನ್ನಿವೇಶಗಳ ನೆಲೆಯಲ್ಲಿ ಹೆಚ್ಚು ಏರಿಳಿತಗಳಿಲ್ಲ. ತುಂಬ ಸಾವಧಾನಿತ ನೆಲೆಗಟ್ಟಿನಲ್ಲಿ, ಭಾವಾವೇಶಗಳಿಗೆ ಕೆಲಸ ಕೊಡದೆ ಸಾಗುವುದು ಇದಕ್ಕೆ ಅನುಕೂಲಕರವಾಗಿದೆ. ಕಾಮಿಕ್ ನೆಲೆಯಿಂದ ಕೊಂಚ ಲಘುವಾಗಿಯೇ ಈ ಗಂಭೀರವಾದ ವಿದ್ಯಮಾನವನ್ನು ಕಾಣುತ್ತ ಹೋಗುವುದರಿಂದ ಒಟ್ಟು ಪರಿಣಾಮಕ್ಕೆ ಕುಂದುಂಟಾಗದೆಂಬ ಅವರ ನಿಲುವು ಸರಿಯಾಗಿಯೇ ಕೆಲಸ ಮಾಡಿದೆ ಅಂತಲೂ ಅನಿಸುತ್ತದೆ.

ಸತ್ಯನಾರಾಯಣ ಅವರ ಕತೆಗಳಲ್ಲಿ ಮುಕ್ಕಾಲುಭಾಗ ನಿರೂಪಣೆಯಲ್ಲಿ ಕಾಣುವ ಒಂದು ಬಗೆಯ ನಿರ್ಭಾವದ, ತಟಸ್ಥ ನಿರೂಪಕನ ಮನೋಭಾವ. ಪ್ರಸ್ತುತ ಕಥಾನಕವನ್ನು, ವಿಚಾರವನ್ನು ತಾನು ಯಾರನ್ನೂ ಉದ್ದೇಶಿಸಿ ಹೇಳುತ್ತಿಲ್ಲ ಎನ್ನುವಂತ ನಿರೂಪಣೆಯಲ್ಲಿ ತೊಡಗುತ್ತದೆ. ಇಲ್ಲಿ ಸತ್ಯನಾರಾಯಣರಾಗಲೀ, ನಿರೂಪಕನಾಗಲೀ ಕಥಾನಕವನ್ನು ಹೇಳುತ್ತಿಲ್ಲ ದಾಖಲಿಸುತ್ತಿರುವಂತಿದೆ. ಆದರೆ ದಾಖಲಿಸುತ್ತಲೇ ಏನನ್ನೋ ಕಾಣಲು ಹೊರಟವನ, ಅಥವಾ ಮನೋಗತದ ನಿರೂಪಣೆಯೂ ಅಲ್ಲ. ಸ್ಥೂಲವಾಗಿ ಇದು ಪ್ರಸೆಂಟೇಷನ್ ಶೈಲಿಯ ನಿರೂಪಣೆ.

ಕೆ.ಸತ್ಯನಾರಾಯಣ ಅವರ ಕತೆಗಳಲ್ಲಿ 'ನಕ್ಸಲ್‌ವರೆಸೆ' ಕತೆ *ವಿಭಿನ್ನ ಮನುಷ್ಯರು ಬದುಕನ್ನು ಮತ್ತು ತಮ್ಮ ಬದುಕಿನಲ್ಲಿ ಎದುರಾಗುವ ಮನುಷ್ಯರನ್ನು ತಮ್ಮ ತಮ್ಮ ಆದ್ಯತೆಗಳಿಗನುಗುಣವಾಗಿ ಗ್ರಹಿಸುವ ಒಂದು ವಿಧಾನವನ್ನು ಸೂಚ್ಯವಾಗಿ ಕಾಣಿಸುತ್ತ ಹೋಗಿದೆ. ಇಲ್ಲಿ ನಿರೂಪಕ ಯಾವುದರ ಪರವಾಗಿಯೋ ಅಥವಾ ವಿರುದ್ಧವಾಗಿಯೋ ಇರುವುದರಿಂದ ಹುಟ್ಟುವ ಮುಜುಗರ ಅಲ್ಲ ಇದು. ನಿರೂಪಕ ಸದಾಕಾಲ ಒಂದು ಮಾತಿನ ಮರ್ಮವನ್ನು ಅರಸುತ್ತಾ ಹೊರಡುವ ಲಹರಿಯ ಮನೋಭಾವವನ್ನು ತೋರುವುದರ ಪ್ರಯತ್ನವೇ ಆಗಿದೆ.

ಇಡೀ ಕತೆ ಕೂಡ ಅಂಥ ಒಂದು ಆರಂಭವನ್ನು ಹೊಂದಿರುವುದನ್ನು ಕಾಣುತ್ತೇವೆ. ಈ ರೀತಿಯ ಸೂಕ್ಷ್ಮ ವಿಷಯಗಳ ಬಗ್ಗೆ ಬರೆಯುವಾಗ ಕತೆಗಾರ ಸಂಯಮವನ್ನು ಕಾಪಾಡಿಕೊಂಡು ಬರುವುದು ಕಷ್ಟ. ಸ್ವತಃ ಬರಹಗಾರ ಬದುಕನ್ನು ನೋಡುವ ದೃಷ್ಟಿ ಮತ್ತು ಆತನ ಜೀವನದೃಷ್ಟಿ ಎರಡರ ಪ್ರಾಮಾಣಿಕತೆಯನ್ನು ಒರೆಗೆ ಹಚ್ಚುವ ವಸ್ತುವಿದು.

* ಕೆ.ಸತ್ಯನಾರಾಯಣರ ಲೇಖನ–ಬರಹಗಾರನ ತಲ್ಲಣ, ಆತಂಕಗಳು;ಶೂದ್ರ ಪ್ರಕಾಶನ

# ಉಪಸಂಹಾರ

**"ಕೆ ಸತ್ಯನಾರಾಯಣ ಅವರ ಕಥೆಗಳು"** ಎಂಬ ವಿಷಯವನ್ನು ತೆಗೆದುಕೊಂಡು ಪ್ರಸ್ತುತ ಸಾಲಿನ (೨೦೧೪-೨೦೧೫) ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಎಂ.ಫಿಲ್ ವಿದ್ಯಾರ್ಥಿ ಡಿ.ಎಸ್.ದಿವ್ಯ ಆದ ನಾನು ಈ ಪ್ರಬಂಧವನ್ನು ಸಿದ್ದಪಡಿಸಿದ್ದೇನೆ.

ಕೆ.ಸತ್ಯನಾರಾಯಣ ಅವರ ಕತೆಗಳಲ್ಲಿ ಸಾಮಾಜಿಕ ಚಿಂತನೆ ತುಂಬಾ ಅದ್ಭುತವಾಗಿ ಮೂಡಿ ಬಂದಿದೆ. ಅವರ ಕಥೆಗಳು ಚಿಕ್ಕದಾಗಿದ್ದರೂ, ಚೊಕ್ಕವಾಗಿ ಕಂಡುಬಂದು ಓದುಗರನ್ನು ಆಕರ್ಷಿಸುವಲ್ಲಿ ಯಶಸ್ವಿಯಾಗಿವೆ. ಈ ಯಶಸ್ಸಿನ ಹಿನ್ನಲೆಯನ್ನು ಇಟ್ಟುಕೊಂಡು, ಸಾಮಾಜಿಕವಾಗಿ ಜೀವನ ಕ್ರಮವನ್ನು ಸವಿವರವಾಗಿ ಹೇಳಲು ಸಹಕಾರಿಯಾಗುವಂತಹ ಸಾಹಿತ್ಯದಲ್ಲಿ ಕಥೆಗಳ ಪ್ರಾಕಾರವನ್ನು ಆಯ್ಕೆ ಮಾಡಿಕೊಂಡಿದ್ದಾರೆ.

ಇವರ ಕಥೆಗಳಲ್ಲಿ ಸಾಮಾಜಿಕ, ಸಾಂಪ್ರದಾಯಿಕ, ಧಾರ್ಮಿಕ ಆಚರಣೆಗಳು ಮಾನವ ಕುಲಕ್ಕೆ ಹೇಗೆ ಸಾಧಕ ಬಾಧಕಗಳನ್ನು ಸೃಷ್ಟಿಸುತ್ತವೆ ಮತ್ತು ಅವುಗಳಿಂದಾಗುತ್ತಿರುವ ಪರಿಣಾಮಗಳ ಬಗ್ಗೆ ಸೂಕ್ಷ್ಮವಾಗಿ ತಿಳಿಸುವ ಪ್ರಯತ್ನವನ್ನು ಮಾಡಿದ್ದಾರೆ.

ಕೆ.ಸತ್ಯನಾರಾಯಣರ ಬರಹ ಮತ್ತು ಚಿಂತನೆ ಸಮಾಜದ ಒಂದು ಭಾಗವೇ ಆಗಿರುವುದರಿಂದ, ಅವರೂ ಕೂಡ ಸಮಾಜದ ಮತ್ತು ಸಂಸ್ಕೃತಿಯ ಒಪ್ಪಿತ ಮೌಲ್ಯಗಳ ಒಂದು ಭಾಗವಾಗಿ ಅವರ ಕಥೆಗಳಲ್ಲಿ ಸಮಾಜದಲ್ಲಿನ ಜೀವನ ಶೈಲಿ, ಆಚಾರ-ವಿಚಾರ, ವರ್ಗಭಾವನೆ, ಒಂದು ಸಂಸ್ಕೃತಿ ಎಂದು ಒಪ್ಪಿಯೂ, ಹಲವು ಕಡೆ ಒಪ್ಪದ ಹಾಗೆಯೂ ಕಂಡು ಬರುತ್ತದೆ.

ಒಟ್ಟಿನಲ್ಲಿ, ಇವರ ಕತೆಗಳು ಸಾಸ್ಕೃತಿಕ ಪಲ್ಲಟ, ತಳಮಳ, ಆತಂಕಗಳನ್ನು ಹಿಡಿದಿಡುವಧರ್ತಿಯವು. ನಗರ-ಹಳ್ಳಿಗಳೆರಡನ್ನು ಅವರು ತಮ್ಮ ಅಂಕಣಗಳಲ್ಲಿ ತರುತ್ತಾರಾದರೂ, ಹಳ್ಳಿಗಳ, ಅದರಲ್ಲೂ ಬಾಲ್ಯದಲ್ಲಿ ಹಳ್ಳಿಗಳಲ್ಲಿ ಅವರಿಗಾದ ಅನುಭವವನ್ನು ಹೇಳುವಲ್ಲಿ ಹೆಚ್ಚು ಉತ್ಸಾಹಿತವಾಗುತ್ತವೆ. ಅಂದು ಇಂದನ್ನು ಮುಖಾಮುಖಿಯಾಗಿಸಿ, ಅಂದಿನ ಬದುಕಿನ ಮಹತ್ವವನ್ನು ತಿಳಿಸುವ ಪ್ರಯತ್ನದಲ್ಲಿ ಆಸಕ್ತಿಯನ್ನು ತೋರುತ್ತವೆ. ಅಂಕಣಗಳ ಮಿತಿಯನ್ನು ಮೀರಿ, ಅವುಗಳ ಸಾಧ್ಯತೆಯನ್ನು ಹಿಗ್ಗಲಿಸುತ್ತಾ, ವಿವೇಚನೆ ಏಕಮುಖದಲ್ಲಿ

ಸಾಗದಂತೆ ನೋಡಿಕೊಳ್ಳುತ್ತಾ, ಪ್ರಬಂಧ/ಹರಟೆ, ಸಣ್ಣಕತೆಗಳಿಗೆ ಹತ್ತಿರವಾಗುವಂತಿದ್ದರೂ, ತಮ್ಮ ವಿಶಿಷ್ಟತೆಯನ್ನು ಉಳಿಸಿಕೊಳ್ಳುತ್ತಿರುವುದರಿಂದ ಅವು ಮುಖ್ಯವಾಗುತ್ತವೆ. ಇಲ್ಲಿನ ಬಹುತೇಕ ಕತೆಗಳು ಆಸಕ್ತಿಯಿಂದ ಓದಿಸಿಕೊಳ್ಳುತ್ತವೆ.

ಮನುಷ್ಯನ ಹೊರಗಿನ ಕತ್ತಲು, ಒಳಗಿನ ಕತ್ತಲುಗಳನ್ನು ಬುದ್ಧಿಯ ಬೆಳಕು ಕಡಿಮೆ ಮಾಡಲಾರದೆಂಬ ತಿಳುವಳಿಕೆ ತೀವ್ರವಾದಾಗ ಎಲ್ಲ ಬರವಣಿಗೆಯೂ ಭಾರವೇ. ಇಲ್ಲಿನ ಕತೆಗಳು ಪ್ರೀತಿಯ ಬೆಳಕು ಅಪವಾದ, ಕ್ರೌರ್ಯವೇ, ಸ್ವಾರ್ಥವೇ ನಿಯಮ ಎಂಬ ಅನಿಸಿಕೆಯನ್ನು ಮೂಡಿಸುತ್ತವೆ. ಎಷ್ಟೋ ಸಲ ಸತ್ಯನಾರಾಯಣ ಅವರು "ಇನ್ನು ಬರೆಯಲು ಸಾಧ್ಯವಿಲ್ಲ. ಬರೆಯಬಾರದು" ಎಂದು ಹೇಳಿಕೊಂಡಿದ್ದಾರೆ. ಮತ್ತೆ ತಡೆಯಲಾಗದೆ ಬರೆದಿದ್ದಾರೆ. ನಮ್ಮೆಲ್ಲರ ಪರವಾಗಿ ಮತ್ತು ನಮ್ಮೆಲ್ಲರಿಗಾಗಿ ಅವರು ಇನ್ನಷ್ಟು ಜಗತ್ತನ್ನು ಕಟ್ಟಿಕೊಡಲಿ ಎಂದು ನನ್ನ ಕೋರಿಕೆ.

ಈ ನಿಟ್ಟಿನಲ್ಲಿ ಕೆ.ಸತ್ಯನಾರಾಯಣ ಅವರ ಪ್ರಾತಿನಿಧಿಕ ಕಥೆಗಳನ್ನು ವಿವೇಚನೆಗೆ ಒಳಪಡಿಸಿ ಅವರ ಎಲ್ಲಾ ಬರಹಗಳ ಒಟ್ಟು ಸಾಧನೆಗೆ ಭಂಗಬಾರದಂತೆ ಅವರ ಜೀವನ ದೃಷ್ಟಿ, ಸಾಮಾಜಿಕ ಕಾಳಜಿ, ಕೌಟುಂಬಿಕ ಪರಂಪರೆಯ ಬಗೆಗಿನ ಅಭಿಮಾನ ಮೊದಲಾದ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಕನ್ನಡ ಸಾಹಿತ್ಯದ ಹೊಸ ಕಾಲದ ಮುಂದುವರಿದ ಪ್ರಸ್ತುತಗೊಳಿಸುವ ಅವರ ಕಥೆಗಳ ಅಧ್ಯಯನದ ಮಹತ್ವವನ್ನು ನಿರ್ಣಯಿಸುವ ಆಶಯದ ಪ್ರಯತ್ನವನ್ನು ತಿಳಿಸುವ ಕಾರ್ಯವನ್ನು ಪ್ರಾಮಾಣಿಕವಾಗಿ, ಪ್ರಯತ್ನಪೂರ್ವಕವಾಗಿ ಮಾಡಿದ್ದೇನೆಂದು ತಿಳಿಸಲಿಚ್ಛಿಸುತ್ತೇನೆ.

## ಆಕರ ಗ್ರಂಥಗಳು : ಪರಾಮರ್ಶನ ಗ್ರಂಥಗಳು


೧. ಈ ತನಕದ ಕತೆಗಳು

೨. ಒಂದು ಕಥಾನಕದ ಮೂಲಕ

೩. ರಾಜಧಾನಿಯಲ್ಲಿ ಶ್ರೀಮತಿಯರು

೪. ಗೌರಿ

೫. ಸನ್ನಿಧಾನ

೬. ಕಾಲಜಿಂಕೆ

೭. ವಿಚೇದನಾ ಪರಿಣಯ

೮. ಸಣ್ಣ ಕಥೆಗಳು

ಅ. ನಿಮ್ಮ ಮೊದಲ ಪ್ರೇಮದ ಕಥೆ

ಆ. ಹಳೆಯಕಾಲದ ಹೊಸ ಕತೆ

ಇ. ವಿಕ್ಟೋರಿಯಾ ಮಗ ದೇವಲಿಂಗು

ಈ. ನಕ್ಸಲ್ ವರಸೆ

ಉ. ಪ್ರಸಿದ್ಧ ನಾಮಾ

ಊ. ಹೆಗ್ಗುರುತು

ಋ. ಭಾವ ಕಲ್ಲೋಲ

೯. ಪ್ರಬಂಧಗಳು

ಅ. ನಮ್ಮ ಪ್ರೀತಿಯ ಕ್ರಿಕೆಟ್

ಆ. ದಾಂಪತ್ಯಕ್ಕೊಂದು ಶೀಲ

ಇ. ನಿಂತ ಬಂಡಿಯ ದೇಶಾಂತರ

ಉ. ಲೋಕಪ್ರಬಂಧ

೧೦. ವಿಮರ್ಶೆ

ಅ. ಆಸಕ್ತಿ

ಆ. ಮನೋಧರ್ಮ

ಇ. ಖಾಸಗಿ ವಿಮರ್ಶೆ

೧೧. ಪ್ರವಾಸ ಕಥನ

ಸದ್ದು! ದೇವರು ಸ್ನಾನ ಮಾಡುತ್ತಿದ್ದಾರೆ

೧೨. ಅಂಕಣ ಬರಹ

ಕುಶಲೋಪರಿ

೧೪. ಅಂತರ್ಜಾಲದಲ್ಲಿ ದೊರೆತ ಲೇಖನಗಳು ಹಾಗೂ ವಿಮರ್ಶೆ

**ಪ್ರಶಸ್ತಿಗಳು**

ಕರ್ನಾಟಕ ಸಾಹಿತ್ಯ ಆಕಾಡೆಮಿ ಪ್ರಶಸ್ತಿ
ಮಾಸ್ತಿ ಪುರಸ್ಕಾರ.

ಪತ್ರಿಕೆಗಳು
ಕನ್ನಡಪ್ರಭ, ಪ್ರಜಾವಾಣಿ, ಉದಯವಾಣಿ, ಮಯೂರ.